3-4-94 ಭಾನುವಾರ ಪ್ರಾತಃಕಾಲ ತ್ರಿವಿಧ ದಾಸೋಹಿ ಮುಂಡರಗಿಯವರ ಪೂಜ್ಯ ಡಾ|| ಶ್ರೀ ಶ್ರೀ ಅನ್ನದಾನೀಶ್ವರಮಹಾಸ್ವಾಮಿಗಳವರ 87 ನೇ ಜನ್ಮದಿನೋತ್ಸವ-ಗುರುವಂದನ



ಚಿತ್ರದಲ್ಲಿ ಎಡದಿಂದ ಬಲಕ್ಕೆ ಕೇಂದ್ರ ಹಣಕಾಸು ಸಚಿವ ಶ್ರೀ ಎಂ. ವಿ. ಚಂದ್ರಶೇಖರ ಮೂರ್ತಿ, ಮುಂಡರಗಿ ಸಂಸ್ಥಾನನ ಪೂಜ್ಯ ಶ್ರೀ ಶ್ರೀ ಅನ್ನದಾನೀಶ್ವರಸ್ವಾಮಿಗಳು, ಕ.ರಾ.ಸಾ. ಸಚಿವ ಶ್ರೀ ಭೀಮಣ್ಣ ಖಂಡ್ರೆ, ಶ್ರೀ ಶ್ರೀ ಗಳವರ ವಜ್ರಮಹೋತ್ಸವ ಪ್ರತಿಷ್ಠಾನ ಅಧ್ಯಕ್ಷ ಡಾ|| ಎಂ.ಸಿ. ಮೋದಿ ಮತ್ತು ಕಾರ್ಯಾಧ್ಯಕ್ಷ ಶ್ರೀ ಬಿ. ಎಸ್. ಮುದ್ದಪ್ಪ ಇವರುಗಳನ್ನು ಕಾಣಬಹುದು.

# ಸಿದ್ಧಗಂಗಾ

ಸಂಪುಟ-30. ಸಂಚಿಕೆ 4-5. ಏಪ್ರಿಲ್-ಮೇ 1994.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಆಡಿಕೊಂಡಿರುವಂತೆ ಮಗು ತಾಯಮಡಿಲೊಳಗೆ
ನಾನಾಡಿ ಕೊಂಡಿರುವೆ ತವ ಪದದಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ಸೇವಾಭಿ ಮಾನಗಳೆ ನಿನ್ನರಿಯುವದಾರಿ
ಕಾಲ ಕರ್ಮವ ಗೆಲುವ ರಹದಾರಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ಆನೆ ದೊಡ್ಡದು ತಂದೆ ಇರುವೆ ಚಿಕ್ಕದು ಗುರುವೆ
'ನಾನಿರುವೆ' ನಿನ್ನ ಮುಂದೆ ಶ್ರೀಗುರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

— ಹೆಚ್. ವಿ. ವೀರಭದ್ರಯ್ಯ.



# ಶ್ರೀವಾಣಿ

## ಮೂರು ನಾಮ

ಶಿವಪ್ಪ ಶಾಸ್ತ್ರಿಗಳು ಕಥಾಕಾಲಕ್ಷೇಪ ಕಲೆಯಲ್ಲಿ ಅನುಭವಿಗಳು. ದೊಡ್ಡ ವಿದ್ವಾಂಸರು. ಪ್ರತಿಭೆ ಪಾಂಡಿತ್ಯಗಳ ಸಂಗಮವಾಗಿದ್ದರು. ಕಂಚಿನ ಕಂಠ. ತೇಜ ಪೂರ್ಣಮುಖ. ಪ್ರವಚನಕ್ಕೆ ನಿಂತರೆ ಸಹಸ್ರ ಸಂಖ್ಯೆಯ ಜನಸಂದಣಿಯ ಸಭೆಯೂ ನಿಶ್ಶಬ್ದವಾಗಿ ಬಿಡುತ್ತಿತ್ತು. ಪಂಡಿತ ಪಾಮರರೆಲ್ಲ ತಲೆದೂಗುವಂತೆ ಕಥೆ ನಡೆಸು ತ್ತಿದ್ದರು. ಅವರದು ಅಗಾಧವಾದ ವ್ಯಾಸಂಗ. ಪುರಾಣ, ಶಾಸ್ತ್ರ, ಸಾಹಿತ್ಯ, ಲೋಕಾನುಭವ, ಜಾನಪದಗಳಿಂದ ಸಮ್ಮಿಳಿತವಾದ ಜ್ಞಾನ ಶಾಸ್ತ್ರಿಗಳದ್ದು. ಗಮಕ ವಂತೂ ಪರಿಸ್ಫುಟ. ಸಮಯ ಸ್ಫೂರ್ತಿಯಲ್ಲಿ ಎತ್ತಿದಕೈ. ಅಖಂಡ ಧೈರ್ಯ.

ಒಮ್ಮೆ ನೆಲಮಂಗಲದಲ್ಲಿ ಶಾಸ್ತ್ರಿಗಳ ಕಾರ್ಯಕ್ರಮವಿತ್ತು. ಆ ದಿನದ ಸಭೆಯ ಅಧ್ಯಕ್ಷತೆ ತಾಲ್ಲೂಕಿನ ತಹಶೀಲ್ದಾರರದಾಗಿತ್ತು. ಶಾಸ್ತ್ರಿಗಳು ಸಮಯ ನಿಷ್ಠೆಯುಳ್ಳವರು. ಕಾಲಕ್ಕೆ ಸರಿಯಾಗಿ ಕಥೆ ಪ್ರಾರಂಭಿಸಿದರು, ಅಧ್ಯಕ್ಷರು ಇನ್ನೂ ಬರಬೇಕಾಗಿತ್ತು, ಅರ್ಧಗಂಟೆ ತಡವಾಗಿ ಬಂದರು. ಅವರು ಬರುತ್ತಿದ್ದುದನ್ನು ಕಂಡ ಶಾಸ್ತ್ರಿಗಳು " ಅವರ ಹಣೆಯತ್ತ ಗಮನಿಸಿ " ''ಆಗೋ ಬಂತು ಮೂರ್ನಾಮ, ತಗೋ ಬಂತು ಮೂರ್ನಾಮ" ಎಂದು ಕೀರ್ತನೆ ಪ್ರಾರಂಭಿಸಿದರು. ಆಗಿನ್ನೂ ಸ್ವಾತಂತ್ರ್ಯ ಪೂರ್ವದ ಕಾಲ. ತಹಸೀಲ್ದಾರರೆಂದರೆ ಭಯ-ಭೀತಿಯಿದ್ದ ದಿನಗಳು. ತಾಲ್ಲೂಕಿನ ದಂಡಾ ಧಿಕಾರಿಯೆಂದರೆ ಜನ ನಡುಗುತ್ತಿದ್ದ ಪರಿಸ್ಥಿತಿ. ಅಂತಹವರನ್ನು ಶಾಸ್ತ್ರಿ ಗಳು ಗೇಲಿ ಮಾಡುತ್ತಿದ್ದಾರಲ್ಲಾ ! ಮುಂದೇನು ಕಾದಿದೆಯೋ ? ಎಂದು ಗಾಬರಿ ಯಾಗುವಂತೆ ಜನ 'ಗುಸು ಗುಸು ಪಿಸು ಪಿಸು' ಆಡಿಕೊಳ್ಳುವುದಕ್ಕೆ ಕಾರಣವಾ ಯಿತು. ಆದರೆ ಶಾಸ್ತ್ರಿಗಳ ಪ್ರತಿಭೆ ಕೆಲಸ ಮಾಡಿತು. ಕೀರ್ತನೆ ಮುಂದುವರಿಸಿದರು. " ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಮೂರ್ನಾಮ, ಲಕ್ಷ್ಮಿ, ಸರಸ್ವತಿ, ಗಿರಿಜೆಯರೆಂಬ ಮೂರ್ನಾಮ". ಎಂದು ಹಾಡತೊಡಗಿದರು. ಸಭೆ ನಿರಾಳವಾಯಿತು. ನಿಟ್ಟುಸಿರು ಬಿಟ್ಟಿತು. ಬಂದ ಅಧ್ಯಕ್ಷರು ತಹಶೀಲ್ದಾರರು. ಶಾಸ್ತ್ರಿಗಳ ಪ್ರತಿಭೆಯನ್ನು ಪ್ರಶಂಸಿಸುತ್ತ ಶಿವಪ್ಪಶಾಸ್ತ್ರಿಗಳು ನಮ್ಮ ನಾಡಿನ ಅಮೂಲ್ಯ ಸಂಪತ್ತು. ಅವರ ವಿದ್ವತ್ತು ಪಾಂಡಿತ್ಯಗಳ ಕಣ್ಣು ಅವರಲ್ಲಿರುವ ಪ್ರತಿಭೆಯಿಂದ ಪ್ರಕಟವಾಗುತ್ತಿವೆ. ಹಾಸ್ಯವನ್ನು ಇಷ್ಟೊಂದು ಉದಾತ್ತವಾಗಿ-ಗಂಭೀರತೆಯ ಕಡೆಗೆ ಹರಿಸುವವರು ವಿರಳ ಎಂದು ತಮ್ಮನ್ನೇ ಗೇಲಿ-ಮಾಡಿದರೂ ಗುಣವನ್ನು ಗುರುತಿಸಿಕೊಂಡಾಡಿದರು. ಆಶುಕವಿಗಳಾದ ಶಿವಪ್ಪಶಾಸ್ತ್ರಿಗಳ ಹಾಸ್ಯದೃಷ್ಟಿ ಶಿವಪರವಾದುದು, ದೈವೀಮುಖವಾದುದು.

(23-11-1993 ರ ಆಶೀರ್ವಚನದಿಂದ ಸಂಗ್ರಹ)

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 30ನೇ **ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ** ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.


" ಸಂಪಾದಕರು ",
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572104.



ಚಂದಾ ದರ
ವಾರ್ಷಿಕ ಚಂದಾ 30-00ರೂ
ಆಜೀವ ಸದಸ್ಯತ್ವ 350-00

# ಶ್ರೀ ಸಿದ್ಧಲಿಂಗೇಶ್ವರ ವಚನ



ನೆಲ ನೀರು ಕಿಚ್ಚು ಗಾಳಿ ಬಯಲು ಕೂಡಿ ಆದ ಪಿಂಡವ ನಾನೆಂಬ
ಮಿಥ್ಯಾ ಚರ್ಮದೇಹಿಗಳ ನೇನೆಂಬೆನಯ್ಯಾ ?
ನೆಲನಲ್ಲದ, ನೀರಲ್ಲದ, ಕಿಚ್ಚಲ್ಲದ, ಗಾಳಿಯಲ್ಲದ, ಬಯಲಲ್ಲದ,
ಪ್ರಕೃತಿಯಲ್ಲದ, ಪುರುಷನಲ್ಲದ,
ಮೇಲಣ ಶುದ್ಧ ಸ್ವಯವೆ ತಾನೆಂದು ತಿಳಿವಾತನಲ್ಲದೆ ಶರಣನಲ್ಲ ಕಾಣಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !

ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ ಇವೆಲ್ಲ ಒಟ್ಟುಗೂಡಿದ್ದೇ ದೇಹ. ಅಂತಹ ಪಾಂಚ ಭೌತಿಕ ದೇಹವನ್ನೇ ಅಜ್ಞಾನದಿಂದ ನಾನೆಂದು ತಿಳಿಯುವವರನ್ನು ಏನೆನ್ನಬೇಕೋ ತಿಳಿಯದಾಗಿದೆ. ದೇಹವು ನಾನಲ್ಲ, ನನ್ನದಲ್ಲ, ನಾನು ಪ್ರಕೃತಿ ವರ್ಗವನ್ನು ಮೀರಿದ ಕೇವಲ ಚೈತನ್ಯ ರೂಪವಾದ ತತ್ವವಾಗಿರುವೆನೆಂಬ ನಿಷ್ಠೆಯುಳ್ಳವನೇ ಮಹಾ-ಮಾಹೇಶ್ವರನು.

[ಕೃಪೆ :- ಷಟ್‌ಸ್ಥಲ ಜ್ಞಾನಸಾರಾಮೃತ - ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ ಸೇವಾ ಸಂಘ-ಎಡೆಯೂರು ಗದಗ.]

# ಸಂಪಾದಕೀಯಂ

ವಚನ ಸಂಸ್ಕೃತಿ ಮನುಕುಲಕಂಡ ಅಪೂರ್ವ ಬೆಳಕು. ಆ ಬೆಳಕಿನಲ್ಲಿ ಎದ್ದು ಬಂದ ಕ್ರಿಯಾಶೀಲರದೆಷ್ಟೋ ಮಂದಿ. ಅವರು ತೋರಿಸಿ ಆಚರಿಸಿದ ಜೀವನ ಮೌಲ್ಯಗಳಂತೂ ಸಾರ್ವಕಾಲಿಕ ಪ್ರಸ್ತುತಗಳು. "ಅನ್ಯರಿಗೆ ಅಸಹ್ಯಪಡಬೇಡ" ಎಂಬ ಧ್ಯೇಯವಾಕ್ಯದಡಿಯಲ್ಲಿ ಅರಳಿದ ಮಾನವೀಯತೆಯನ್ನೇ ಎತ್ತಿಹಿಡಿದ, ಆರಾಧಿಸಿದ ವಚನ ಸಂಸ್ಕೃತಿಯ ಒಂದು ಅಂಗವಾದ ವಚನಸಾಹಿತ್ಯ ಕೃಷಿಮಾಡಿದ ಪುಣ್ಯಾತ್ಮರು ಬಹಳಜನ. ಪ್ರಾತಃ ಸ್ಮರಣೀಯರಾದ ಪೂಜ್ಯ ಪಿ. ಜಿ. ಹಳಕಟ್ಟಿಯವರಾದಿಯಾಗಿ ಅನೇಕರು ಅರ್ಪಣಾ ಮನೋಭಾವದಿಂದ ದುಡಿದಿದ್ದಾರೆ. ಸಮಾಜಕ್ಕೆ ಬಹುದೊಡ್ಡ 'ಆಸ್ತಿ'ಯೆನಿಸಿದ್ದಾರೆ. ವಚನ ಸಾಹಿತ್ಯ ಎತ್ತರ- ಬಿತ್ತರಗಳನ್ನು ತೋರಿಸಿ ಕೊಟ್ಟಿದ್ದಾರೆ. ವಚನಗಳನ್ನು ಸಂಗ್ರಹಿಸಿದ್ದಾರೆ, ವ್ಯಾಖ್ಯಾನಿಸಿದ್ದಾರೆ, ಸಂಪಾದಿಸಿದ್ದಾರೆ, ಪ್ರಕಟಿಸಿದ್ದಾರೆ ಈ ಮಣಿಹದಲ್ಲಿ ವೈಯಕ್ತಿಕನಷ್ಟ-ಕಷ್ಟಗಳನ್ನೂ, ನೋವು-ನೆರಳಿಕೆಯನ್ನು ಅನುಭವಿಸಿದ್ದಾರೆ, ಕೀರ್ತಿವಾರ್ತೆಗಳಿಗೆ ಆಕಾಂಕ್ಷಿಸದೆ ಹಿಡಿದ ಕೆಲಸವನ್ನು ಬಿಡದೆ ಕಡೆತನಕ ದುಡಿದಿದ್ದಾರೆ. ದುಡಿದುಹಣ್ಣಾಗಿದ್ದಾರೆ. ವಚನ ಸಾಹಿತ್ಯದ ಮೂಲಕವೇ ನಾವಿಂದು ಅಪೂರ್ವ ಸಂಸ್ಕೃತಿಯಪರಿಚಯ ಮಾಡಿಕೊಳ್ಳುತ್ತಿದ್ದೇವೆ. ವಚನ ಸಾಹಿತ್ಯದ ಉಳಿವಿಗೆ ಕಾರಣರಾದವರನ್ನು ಮರೆಯುತ್ತಿದ್ದೇವೆ. ಪ್ರತಿವರ್ಷ ಶರಣರ-ಶರಣೆಯರ ಜಯಂತಿಗಳನ್ನು ವೈಭವದಿಂದ ಉತ್ಸವಾದಿಗಳೊಂದಿಗೆ ಆಚರಿಸುತ್ತಿದ್ದೇವೆ. ವಚನ ಗಾಯನವನ್ನು ಏರ್ಪಡಿಸುತ್ತಿದ್ದೇವೆ. ವಚನಗಳ ಧ್ವನಿ ಸುರಳಿಗಳನ್ನು ಬಿಡುಗಡೆ ಮಾಡುತ್ತಿದ್ದೇವೆ. ಅಲ್ಲೊಮ್ಮೆ ಇಲ್ಲೊಮ್ಮೆ ಅಪರೂಪಕ್ಕೆ ವಚನ ಸಾಹಿತ್ಯಕ್ಕಾಗಿ ದುಡಿದ ವಿದ್ವಾಂಸರನ್ನು ಗೌರವಿಸುತ್ತಿದ್ದೇವೆ. ಆದರೆ ಇದು ಸಾಲದು. ಎಲ್ಲಿಯೋ ಶರಣರ ಜಯಂತಿ ಅಥವಾ ಶಿವಾನುಭವ ಶಿಬಿರಗಳು ನಡೆಯಲಿ, ವಚನಸಾಹಿತ್ಯ ವ್ಯವಸಾಯದಲ್ಲಿ ತೊಡಗಿದ ಪುಣ್ಯಜೀವಿಗಳನ್ನು ಗೌರವಿಸುವ ಸತ್ಕರಿಸುವ, ಸನ್ಮಾನಿಸುವ, ಆರ್ಥಿಕ ನೆರವುನೀಡುವ ಸತ್ಸಂಪ್ರದಾಯ ಬೆಳೆದುಬರಬೇಕಾದುದು ಆದ್ಯತೆಯ ಸೇವೆ. ಗೌರವಿಸುವ ಸಂದರ್ಭದಲ್ಲಿ ವಿದ್ವಾಂಸರ ಅವಶ್ಯಕತೆಯನ್ನು ಅರಿತುಅದಕ್ಕನುಗುಣವಾಗಿ ಸನ್ಮಾನಿಸುವುದು ಇನ್ನಿಷ್ಟು ಒಳ್ಳೆಯದು, ಸ್ವಾಗತಾರ್ಹವಾದುದು. 'ಬಡತನದಹೊತ್ತು ಆನೆ ದೊರೆಕೊಂಡೇನುಫಲ' ಎನ್ನುವಂತಾಗಬಾರದು. ಒಮ್ಮೆ ಪೂಜ್ಯ ಪಿ. ಜಿ. ಹಳಕಟ್ಟಿಯವರನ್ನು ಸನ್ಮಾನಿಸುವ ಸಂದರ್ಭದಲ್ಲಿ ನಡೆಯಿತೆಂದು ತಿಳಿದ ಪ್ರಸಂಗ ಹೀಗಿದೆ. ಹಳಕಟ್ಟಿಯವರು ಸನ್ಮಾನಕ್ಕೆ ಹೋಗಿದ್ದ ಸಂದರ್ಭದಲ್ಲಿ ಧರಿಸಿದ್ದ ಕೋಟು ಹರಿದಿತ್ತಂತೆ. ಅದನ್ನು ಗಮನಿಸಿದ ಗಣ್ಯರೊಬ್ಬರು ಹಳಕಟ್ಟಿಯವರನ್ನು ಕೇಳಿದರಂತೆ. ಸನ್ಮಾನಕ್ಕೆ ಬರುವಾಗ ಒಂದು ಒಳ್ಳೆಯ ಕೋಟು ಧರಿಸಿ ಬರಬಾರದೇ ಎಂಬುದಾಗಿ. ಅದಕ್ಕೆ ಹಳಕಟ್ಟಿಯವರು ಪ್ರತಿಯಾಗಿ 'ಏನುಮಾಡುವುದು ಹೇಳಿ, ಸನ್ಮಾನ ಮಾಡುವವರೆಲ್ಲ ಬರೀಶಾಲನ್ನು ಮಾತ್ರ ಹೊದಿಸುತ್ತಾರೆ. ಒಂದು ಕೋಟು ಹೊಲಿಸಿಕೊಡುವುದಿಲ್ಲ ಎಂದರಂತೆ ಸಮಾಜ ಇಂಥದನ್ನು ಅರ್ಥಮಾಡಿಕೊಳ್ಳಬೇಕು ತಮ್ಮ ಮೂಲಭೂತ ಅವಶ್ಯಕತೆಗಳ ಕಾರ್ಪಣ್ಯದಲ್ಲಿಯೂ ವಚನ ಸಾಹಿತ್ಯಕ್ಕಾಗಿ ಸೇವೆಗೈದವರನ್ನು ಸೂಕ್ತವಾಗಿ ಗೌರವಿಸುವ ಸುಸಂಸ್ಕೃತಿಯನ್ನು ಆಚರಣೆಯಲ್ಲಿ ತರಬೇಕು. ನಾಡಿನುದ್ದಗಲದಲ್ಲಿ ಅಂತಹ ವಿದ್ವಾಂಸರಿದ್ದಾರೆ. ಅಕ್ಕನ ಜಯಂತಿ, ಬಸವಜಯಂತಿಯಂಥ ಸಂದರ್ಭಗಳಲ್ಲಿ ಇದು ಅಗತ್ಯವಾಗಿ ಆಗಲೇಬೇಕಾದ, ಮಾಡಲೇಬೇಕಾದ ಪವಿತ್ರಸೇವೆ. ಹಾಗಾಗಲಿ ಎಂದು 'ಸಿದ್ಧಗಂಗಾ ಹಾರೈಸುತ್ತದೆ.

# ಕಂತೆ ಕಾಯಕ

**ಚಿದ್ರಸವಿಧಾನ** **—ಬಿ. ಎಸ್ ಶಿವಲಿಂಗಯ್ಯ**

**ಗೇರು ತುಪ್ಪದ ಪಾಕ ತೆಗೆಯುವ ವಿಧಾನ - ಒಲೆ ವ್ಯವಸ್ಥೆ**

ಚಿತ್ರಸ ತಯಾರಿಸುವ ಸ್ಥಳದಲ್ಲಿ (ಚಾಕಿ) ಬಿಸಿಲು ಇರಬಾರದು ಹೆಚ್ಚು ಗಾಳಿಯಿರಬಾರದು. ಅಂಥ ಕಡೆಯಲ್ಲಿ ಹತ್ತು ಅಂಗುಲ ಗುಂಡಾದ ಒಂದು ಗುಣಿಯನ್ನು ಮಾಡಬೇಕು. ಗುಣಿಯು ಒಂದು ಅಡಿ ಆಳವಿದ್ದು ಮಡಕೆಯೋಪಾದಿಯಲ್ಲಿ ಒಳಗಡೆ ಗುಂಡಾಗಿರಬೇಕು. ಪಶ್ಚಿಮ ಭಾಗದಲ್ಲಿ ಒಲೆಯ ಬಾಯಿಯಿರಬೇಕು. ಒಲೆಯ ಬಾಯಿ ಎಂಟು ಅಂಗುಲ ಅಗಲ, ಎಂಟು ಅಂಗುಲ ಎತ್ತರವಾಗಿರಬೇಕು. ಆಲೇ ಮನೆಯ ಒಲೆಯಂತಿರಬೇಕು. ಹೊಗೆ ಹೋಗಲು ಒಲೆಯ ಪೂರ್ವಭಾಗದಲ್ಲಿ ಎರಡು ಅಡಿ ಅಂತರದಲ್ಲಿ ಮೂರಿಂಚು ಅಗಲದ ರಂಧ್ರ ಬಿಡಬೇಕು. ಒಲೆಯ ವ್ಯವ-ಸ್ಥೆಯಾದ ಮೇಲೆ ಗೇರುತುಪ್ಪವಿರುವ ಮಡಕೆಯನ್ನು ಒಲೆಯ ಮೇಲಿಟ್ಟು ಕಲಸಿದ ಮಣ್ಣಿನಿಂದ ಒಲೆಯ ಬಾಯಿಗೂ, ಗೇರು ತುಪ್ಪವಿರುವ ಮಡಕೆಯ ತಳಭಾಗದ ಸುತ್ತ ಲೇಪಿಸಬೇಕು. ಒಲೆಯ ಉರಿಯು ಯಾವ ಕಾರಣಕ್ಕೂ ಒಲೆಯ ಮೇಲಕ್ಕೆ ಬರದಂತೆ ನೋಡಿಕೊಳ್ಳಬೇಕು. ಗೇರುತುಪ್ಪಕ್ಕೆ ಉರಿ ತಾಗಿದರೆ ಹತ್ತಿಕೊಳ್ಳುವ ಸಂಭವವುಂಟು. ಅದಕ್ಕಾಗಿ ಎಚ್ಚರಿಕೆಯಿಂದ ಗೇರುತುಪ್ಪದ ಪಾಕ ತೆಗೆಯುವವರೆಗೆ ನೋಡಿಕೊಳ್ಳಬೇಕು.

**ಪಾಕ ತೆಗೆಯುವ ಕ್ರಮ :–** ಗೇರು ತುಪ್ಪವಿರುವ ಮಡಕೆಗೆ ಒಂದೇ ಸಮ ಪ್ರಮಾಣದಲ್ಲಿ ಉರಿ ಹಾಕುತ್ತಿರಬೇಕು. ಹೀಗೆ ಉರಿಯುತ್ತಿರುವಾಗ ಬೆಲ್ಲದ ಪಾಕ ಬಂದಂತೆ ಏಳುಸಾರಿ ಉಕ್ಕುಬಂದು ಏಳುಸಾರಿ ಇಳಿಯುತ್ತದೆ. ಅಂಥ ವೇಳೆಯಲ್ಲಿ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು. ಮೈಮರೆತರೆ ಉಕ್ಕು ಹೊರಬಂದು ಎಲ್ಲ ಸೋರಿಹೋಗುವುದುಂಟು ಒಂದು ಮೊಳದುದ್ದ ಬಿದಿರುದಬ್ಬೆ ಅಥವಾ ಒಣ ಕಟ್ಟಿ-ಗೆಯಿಂದ ಉಕ್ಕು ಮೇಲೆ ಬರದಂತೆ ತಿರುಗಿಸುತ್ತಿರಬೇಕು. ತಿರುಗಿಸುತ್ತಿರುವಾಗ ಬಂದ ನೊರೆಯೆಲ್ಲ ಕರಗುತ್ತದೆ ಆಗ ಒಂದು ಅಗಲವಿರುವ ಪಾತ್ರೆಯಲ್ಲಿ ನೀರನ್ನಿಟ್ಟು ಕೊಂಡು ತಿರುವುತ್ತಿರುವ ಕೋಲಿನಿಂದ ಒಂದು ತೊಟ್ಟು ಪಾಕವನ್ನು ನೀರಿನಲ್ಲಿ ಹಾಕಿದರೆ ಅದು "ಬಟ್ಟೆ"ನಂತೆ ಮೇಲೆ ತೇಲುತ್ತದೆ. ಅದನ್ನು ಒಂದು ಸಣ್ಣ ಕಡ್ಡಿ ಯಿಂದ ತೆಗೆದು ಇನ್ನೊಂದು ಸಣ್ಣ ಕಡ್ಡಿ ಅಂಟಿಸಿ ಎರಡನ್ನೂ ಎಳೆದರೆ ದಾರದೋಪಾ ದಿಯಲ್ಲಿ ಬರುತ್ತದೆ. ಪಾಕವನ್ನು ಹೀಗೆ ಸಿದ್ಧಪಡಿಸಿಕೊಂಡಮೇಲೆ ಎಣ್ಣೆ ಡಬ್ಬಿಗಳಾಗಲೀ ಅಥವಾ ಮಣ್ಣಿನ ಗಡಿಗೆಗಳಾಗಲೀ ತೆಳುವಾದ ಬಟ್ಟೆಯನ್ನು ಬಾಯಿಗೆಕಟ್ಟಿ ಶೋಧಿಸಿಕೊಳ್ಳಬೇಕು. ಹೀಗೆ ಪಾಕ ಸಿದ್ಧಮಾಡಿಕೊಳ್ಳಬೇಕು.

ಬಟ್ಟೆಕಂತೆ ತಯಾರಿಸುವ ಕ್ರಮ:- ಶೇಖರಿಸಿಟ್ಟ ಬೆರಣಿ ಬೂದಿಯನ್ನು ಬಡಿದಿಟ್ಟುಕೊಳ್ಳಬೇಕು. ಕಡಲೆ ಕಾಯಿ ಎಣ್ಣೆಯ ಕಾಡಿಗೆ ತೆಗೆದು ಮೇಲೆ ಹೇಳಿದ ಮೂರು ಭಾಗ, ಕಾಡಿಗೆ ಒಂದು ಭಾಗ ಎರಡನ್ನೂ ಚೆನ್ನಾಗಿ ಬೆರೆಸಬೇಕು. ಬೆರೆಸಿದ ಭಸ್ಮಕ್ಕೆ ಸ್ವಲ್ಪ ಎಳಸಾಗಿರುವ ಸಿದ್ಧಗೊಳಿಸಿದ ಗೇರು ತುಪ್ಪದ ಪಾಕವನ್ನು ಬಾಣಲೆಗೆ ಹಾಕಿಕೊಂಡು ಮಿಶ್ರಮಾಡಬೇಕು. ಈ ಮಿಶ್ರಣವನ್ನು ಒರಳಿಗೆ ಹಾಕಿ ಕುಟ್ಟಬೇಕು, ಅನಂತರದ ಮಿಶ್ರಣ ಹಿಟ್ಟನಂತಾದ ಮೇಲೆ ಒಂದೆಡೆಗೆ ಇಟ್ಟುಕೊಳ್ಳಬೇಕು. ಮೂರು ಸೇರು ನೀರು ಹಿಡಿಯುವ ಮಣ್ಣಿನ ಪಾತ್ರೆಯನ್ನು ಒಲೆಯ ಮೇಲಿರಿಸಿ ಸೋಸಿರುವ ಗೇರುಪಾಕವನ್ನು (ಒಂದು ಪಾವು ಅೀತೆ ಪ್ರಮಾಣ) ಹಾಕಬೇಕು. ಇದು ಕಾದ ನೀರಿನಂತಾದಮೇಲೆ ಬಾಣಲೆಯಲ್ಲಿರುವ ಬಟ್ಟೆಯನ್ನು ಸ್ವಲ್ಪ ಸಲ್ಪವಾಗಿ ಹಾಕಬೇಕು. ಹಾಕುವಾಗ ಮೇಲಕ್ಕೆ ಪುಡಿ ಹಾಕಬಾರದು. ಇದು ಕಾಯುತ್ತಾ ಹೋದಂತೆ ಬಟ್ಟೆಯೂ ತೆಳ್ಳಗಾಗುತ್ತದೆ. ಇದನ್ನು ಕೋಲಿನಿಂದ ತಿರುವುತ್ತಿರಬೇಕು. ಹೀಗೆ ತಿರುವುತ್ತಿರುವಾಗ ಒಂದು ತರಹ ಬಿಳಿದಾದ ಹೊಗೆಯು ಮೇಲೇಳುತ್ತದೆ. ಇದಕ್ಕೂ ಉರಿ ಮೇಲೆ ಬರದ ರೀತಿ ನೋಡಿಕೊಳ್ಳಬೇಕು. ಮೇಲೆದ್ದರೆ ದಗ್ ಎಂದು ಅಂಟಿ ಕೊಳ್ಳುತ್ತದೆ. ಅಕಸ್ಮಾತ್ತಾಗಿ ಆ ರೀತಿ ಹತ್ತಿಕೊಂಡರೆ ತಕ್ಷಣ ತಟ್ಟೆಯನ್ನು ಮುಚ್ಚ ಬೇಕು. ಪಾಕವನ್ನು ತಿರುವುತ್ತಿದ್ದರೆ ಗಟ್ಟಿಪಾಯಸದಂತಾಗುತ್ತದೆ. ಹೆಚ್ಚಿಗೆ ತಿಳಿಯಾಗಿ ಕಂಡರೆ ಸ್ವಲ್ಪ ಭಸ್ಮವನ್ನು ಸೇರಿಸಿ ಹದಕ್ಕೆ ಬರುವಂತೆ ನೋಡಿಕೊಳ್ಳ ಬೇಕು. ಈ ರೀತಿ ಗಟ್ಟಿ ಪಾಯಸದೋಪಾದಿಯಲ್ಲಿ ಬಂದ ಮೇಲೆ ಬಿಳಿಯ ಹೊಗೆ ಚೆನ್ನಾಗಿ ಕಂಡಮೇಲೆ ಬಾಯಿ ಅಗಲ ವಿರುವ ಒಂದು ಪಾತ್ರೆಯಲ್ಲಿ ನೀರಿಟ್ಟುಕೊಂಡು ತಿರುವುತ್ತಿರುವ ಕೋಲಿನಿಂದ ಆ ಪಾಕವನ್ನು ನೀರಿಗೆ ಹಾಕಿ ತಕ್ಷಣ ಅದನ್ನು ಮುಟ್ಟಿ ನೋಡಿದರೆ ಗಟ್ಟಿಗೊಳ್ಳುತ್ತದೆ, ಈ ಮೇಲೆ ಹೇಳಿದ ಬಟ್ಟೆ ಕಂತೆಯನ್ನು ಕಾಡಿಗೆಯನ್ನು ಸೇರಿಸದೆಯೂ ತಯಾರಿಸಬಹುದು. ಆದರೆ ಅದು ನಯವಾಗಿರುವುದಿಲ್ಲ ಅಲ್ಲದೆ ದೀರ್ಘಕಾಲ ನಿಲ್ಲುವುದಿಲ್ಲ. ಈ ಬಟ್ಟೆಕಂತೆಯು ಇಷ್ಟಲಿಂಗಕ್ಕೆ ಸ್ವಲ್ಪ ಕಠಿಣವಾಗಿರ ಬೇಕು. ಅಂದರೆ ನೀರಿನಲ್ಲಿರುವ ಪಾಕವನ್ನು ತೆಗೆದುಕೊಂಡು ಮುಟ್ಟಿದರೆ ತಕ್ಷಣ ಕಠಿಣವಾಗಿರಬೇಕು. ಸಿದ್ಧೇಶ್ವರಲಿಂಗಕ್ಕೆ ಇದಕ್ಕಿಂತ ಸ್ವಲ್ಪ ಎಳಸಾಗಿರಬೇಕು. ಈ ರೀತಿ ಪಾಕ ಬಂದ ಮೇಲೆ ಆ ಬಟ್ಟೆಕಂತೆಯನ್ನು ಒಂದು ಪಾತ್ರೆಗೆ ಬಗ್ಗಿಸಿ ಕೊಳ್ಳಬೇಕು.

ಒಂದು ದಬರಿಯಾಗಲಿ, ಬೇಸನ್ ಆಗಲಿ ಸೂಕ್ತ. ಈ ಪಾತ್ರೆಗೆ ಸ್ವಲ್ಪ ದಪ್ಪ ವಾದ ಹತ್ತಿ ಬಟ್ಟೆಯನ್ನು ನೀರಿನಲ್ಲಿ ಅದ್ದಿ ಆ ನೀರನ್ನು ಸುಮಾರಾಗಿ ಹಿಂಡಿ, ಅದನ್ನು ಪಾತ್ರೆಯೊಳಗೆ ಹರಡಬೇಕು. ಅನಂತರ ಆ ಬಟ್ಟೆಯ ಮೇಲೆ ಸ್ವಲ್ಪ ನೀರು ಸಿಂಪಡಿಸಿ ಮೇಲಿನ ಮಡಕೆಯಲ್ಲಿರುವ ಪಾಕವನ್ನು ಪಾತ್ರೆಗೆ ಬಗ್ಗಿಸಬೇಕು. ಎರಡು ಗಂಟೆ ಬಿಟ್ಟು ಆ ಪಾತ್ರೆಯಿಂದ ಬಟ್ಟೆ ಸಹಿತ ಹೊರತೆಗೆದು ಆ ಬಟ್ಟೆಯನ್ನು ಪ್ರತ್ಯೇಕಿಸ-ಬೇಕು, ಇದು ಬೆಲ್ಲದಚ್ಚಿನಂತೆ ಗಟ್ಟಿಗೊಳ್ಳುತ್ತದೆ. (ಮುಂದುವರಿಯುತ್ತದೆ.)

## ಕ್ಷೇತ್ರವಾರ್ತೆ

—ಹೆಚ್. ಬಿ. ಗಂಗಾಧರಯ್ಯ.

# ಪೂಜ್ಯ ಶ್ರೀ ಶ್ರೀಗಳವರ 87ನೇ ಜನ್ಮದಿನೋತ್ಸವ —ಗುರುವಂದನ ಮಹೋತ್ಸವ.

ತ್ರಿವಿಧ ದಾಸೋಹ ಮೂರ್ತಿಗಳಾದ ಪರಮ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ 87ನೇ ಜನ್ಮದಿನೋತ್ಸವ–ಗುರುವಂದನಾ ಸಮಾರಂಭ 3–4–94 ರಂದು ವಿಜೃಂಭಣೆಯಿಂದ ನೆರವೇರಿತು.

ಶ್ರೀ ಶ್ರೀಗಳನ್ನು ಹಳೆಯ ಮಠದಿಂದ ಪಂಚಕಳಸ, 87 ಪೂರ್ಣಕುಂಭ ಗಳನ್ನು ಹೊತ್ತ ಶ್ರೀ ಮಠದ ಬ.ಶಿ.ತ.ಸಂ. ವಿದ್ಯಾರ್ಥಿನಿಯರು ರಾಷ್ಟ್ರೀಯ ಜಾನಪದ ಕಲಾವಿದ ಶ್ರೀ ಹೆಚ್. ಎಸ್. ನೀಲಕಂಠಯ್ಯನವರ ವೀರಗಾಸೆ ನೃತ್ಯದೊಂದಿಗೆ ವೇದಿಕೆಗೆ ಹೃದಯ ಪೂರ್ವಕವಾಗಿ ಬರಮಾಡಿ ಕೊಳ್ಳಲಾಯಿತು.

ಶ್ರೀಮಠದ ವಿದ್ಯಾರ್ಥಿಗಳು ಮತ್ತು ಸಂಸ್ಕೃತ ಪ್ರಾಧ್ಯಾಪಕರು ಸಾಮೂಹಿಕ ಪ್ರಾರ್ಥನೆ-ವೇದ ಘೋಷಣೆಯೊಂದಿಗೆ ಸಮಾರಂಭ ಪ್ರಾರಂಭವಾಯಿತು. ಇದರ ದಿವ್ಯ ನೇತೃತ್ವವನ್ನು ಧಾರವಾಡ ಜಿಲ್ಲೆ, ಮುಂಡರಗಿ ಸಂಸ್ಥಾನಮಠದ ಜಗದ್ಗುರು ಶ್ರೀ ಶ್ರೀ ಮಹಾ ಅನ್ನದಾನಿಸ್ವಾಮಿಗಳು ವಹಿಸಿದ್ದರು.

ಮುಖ್ಯ ಮಂತ್ರಿ ಶ್ರೀ ವೀರಪ್ಪಮೊಯ್ಲಿಪರವಾಗಿ ಸಾರಿಗೆ ಸಚಿವ ಶ್ರೀ ಭೀಮಣ್ಣ ಖಂಡ್ರೆ ಸಮಾರಂಭ ಉದ್ಘಾಟಿಸಿ ಮುಖ್ಯ ಮಂತ್ರಿಗಳ ಭಾಷಣವನ್ನು ಓದಿದರು. ಸ್ವಾಮೀಜಿಗಳು ಮಹಾದಾಸೋಹ ಕಾರ್ಯವನ್ನು ಪ್ರಶಂಸಿದ ಮುಖ್ಯ ಮಂತ್ರಿಗಳು ಪ್ರತಿದಿನ 15 ಕ್ವಿಂಟಾಲ್ ಅಕ್ಕಿ ಶ್ರೀಮಠದಲ್ಲಿ ವಿನಿಯೋಗವಾಗುತ್ತಿರುವುದು ಪವಾಡ ಸದೃಶವಾಗಿದೆ ಎಂದು ಅಚ್ಚರಿ ವ್ಯಕ್ತಪಡಿಸಿದ್ದಾರೆ. ಜ್ಞಾನ ದಾಸೋಹ ಸಂಗಮ ಶ್ರೀಮಠ. ವಿಶ್ವದಲ್ಲಿ ಸಹಸ್ರ ಸಹಸ್ರ ಮಕ್ಕಳಿಗೆ ವಿದ್ಯೆಗೆ ಆಶ್ರಯ ನೀಡಿದ ಸಂಸ್ಥೆ. ರಾಷ್ಟ್ರೀಯ ಭಾವೈಕ್ಯತೆ ಇಲ್ಲಿ ಸಾಧಿಸಿದೆ. ಮೇರು ಸದೃಶ ವ್ಯಕ್ತಿತ್ವಹೊಂದಿ ಭಾರತದ ಆಧ್ಯಾತ್ಮಿಕತೆಗೆ ಶ್ರೀ ಶ್ರೀಗಳು ಆದರ್ಶವಾಗಿದ್ದಾರೆ.

ಶ್ರೀ ಮಠದ ಜಾತ್ರೆ ಸಂದರ್ಭದಲ್ಲಿ ನಡೆಯುವ ಕೃಷಿ ಮತ್ತು ಕೈಗಾರಿಕ ವಸ್ತು ಪ್ರದರ್ಶನಕ್ಕೆ ಮುಂದಿನ ವರ್ಷದಿಂದ ಸರ್ಕಾರ ನೆರವುನೀಡುವುದು ಎಂಬ ತೀರ್ಮಾನ ವನ್ನು ಶ್ರೀ ಶ್ರೀಗಳ ಜನ್ಮದಿನದ ಬಳುವಳಿಯಾಗಿ ಮುಖ್ಯ ಮಂತ್ರಿಗಳು ಪ್ರಕಟಿಸಿದರು.

ಕಿರಿಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ಭಕ್ತಿ ಸಮರ್ಪಣೆ ಸಲ್ಲಿಸಿ ಇದು ಭಕ್ತಿಯ ರಸಗಂಗೆ ಪ್ರವಾಹ. ಪೂಜ್ಯರ ಸಾನ್ನಿಧ್ಯದಲ್ಲಿ ನಾನೊಬ್ಬ ಹಸುಳೆ, ಪೂಜ್ಯರ ನೆನಹೇ ನನ್ನಪ್ರಾಣ, ಶ್ರೀ ಮಠದ ಅಮೂಲ್ಯ ಸಂಪತ್ತು ನೀವು, ಭಾರತೀಯ

ಸಂಸ್ಕೃತಿಯ ರೂಪವಾಗಿ ತಪಸ್ಸಿನ ಫಲವಾಗಿ ಶ್ರೀ ಮಠಕ್ಕೆ ಕೀರ್ತಿಕಳಸವಿಟ್ಟು ಮಾರ್ಗದರ್ಶನ ಮಾಡಿದ್ದೀರಿ ಎಂದು ಭಕ್ತಿಭಾವದಿಂದ ನುಡಿದರು.

ಅಧ್ಯಕ್ಷತೆವಹಿಸಿ ಮಾತನಾಡಿದ ಉಪ ಮುಖ್ಯಮಂತ್ರಿ ಶ್ರೀ ಎಸ್. ಎಂ. ಕೃಷ್ಣ ಶ್ರೀ ಶ್ರೀ ಗಳವರು ನೂರ್ಕಾಲ ಬಾಳಿ ನಮ್ಮನ್ನು ಆಶೀರ್ವದಿಸಲಿ. 87 ವರ್ಷಗಳ ಸಾರ್ಥಕ ನಿಷ್ಕಾಮ ಸೇವೆ ಮಾಡಿದ್ದಾರೆ. ಅಲ್ಲಿ ಇಲ್ಲಿ ಮಳೆ ಬೀಳುತ್ತಿದ್ದರೆ ಶ್ರೀ ಶೀ ಗಳ ಉದಯದಿಂದ, ಇಲ್ಲಿಯ ಮಹಾ ದಾಸೋಹ ಕಾರ್ಯ ವಿಶ್ವ ಮಾನ್ಯತೆ ಪಡೆದಿದೆ. ಲೋಕ ಕಲ್ಯಾಣವೇ ದಿವ್ಯ ಮಂತ್ರವಾಗಿದೆ. ದೇಶದ ರಕ್ಷಣೆಗೆ ನಿಮ್ಮ ಆಶೀರ್ವಾದ ಬೇಕು. ನೀವು ಯಾವ ಯಾರ ಶಕ್ತಿಗೂ ಸಿಲುಕ್ಕಿಲ್ಲ. ಸ್ವತಂತ್ರ ವಿಚಾರವಾದಿಗಳು.

ಮುಂದಿನ ವರ್ಷ ನಡೆಯುವ ಶ್ರೀ ಶ್ರೀ ಗಳ 88 ನೇ ಜನ್ಮ ದಿನೋತ್ಸವವನ್ನು ಹೇಮಾವತಿ ನೀರನ್ನು ತುಮಕೂರಿಗೆ ತರುವ ಮೂಲಕ ಆಚರಿಸಲಾಗುವುದು ಎಂದು ಈ ಶುಭ ಸಂದರ್ಭದಲ್ಲಿ ಪ್ರಕಟಿಸಿದರು.

ಮುಖ್ಯ ಅತಿಥಿಯಾಗಿ ಮಾತನಾಡಿದ ಕೇಂದ್ರ ರೈಲ್ವೆ ಸಚಿವ ಶ್ರೀ ಸಿ. ಕೆ. ಜಾಫರ್ ಷರೀಪ್, ಅನ್ನ, ವಿದ್ಯೆ. ಧರ್ಮ ಇವುಗಳ ಪುರೋಭಿವೃದ್ಧಿಗಾಗಿ ಶ್ರಮಿಸು-ತ್ತಿರುವ ಸ್ವಾಮೀಜಿಯವರು ನೂರಾರು ವರ್ಷಗಳ ಕಾಲ ಚಿರಯುವಾಗಿರಲಿ. ಅವರ ಮಾರ್ಗದರ್ಶನ, ಸೇವೆ, ಆದರ್ಶ ತಪೋಬಲಶಕ್ತಿ ನಾಡಿಗೆ ದಾರಿದೀಪವಾಗಲಿ ಎಂದು ಹಾರೈಸಿದರು

ಭಾರತ ಹೊಸ ದಿಕ್ಕಿನಲ್ಲಿ ಮುನ್ನಡೆಯುತ್ತಿದೆ. ತಾಳ್ಮೆ, ಸಹಿಷ್ಣುತೆ, ಕರ್ತವ್ಯ ನಿಷ್ಠೆಗೆ ಆಧಾರವಾಗಿದೆ. ಇದಕ್ಕೆ ಪೂರಕವಾಗಿ ಸಮಾಜ, ಸರ್ಕಾರದ ಕಾರ್ಯಶೀಲತೆ ಮುಖ್ಯ. ರಾಜಕಾರಣಿಗಳಿಂದಲೇ ಎಲ್ಲಾ ಸಮಸ್ಯೆ ಬಗೆ ಹರಿಯುವುದಿಲ್ಲ. ರಾಷ್ಟ್ರ ಸೇವೆಗೆ ಧರ್ಮಪೀಠಗಳ-ಮಠಾಧಿಪತಿಗಳ ಬೆಂಬಲ ಅಗತ್ಯ ಎಂದು ಒತ್ತಿ ಹೇಳಿದರು.

ಕೇಂದ್ರ ಹಣಕಾಸು ರಾಜ್ಯ ಸಚಿವ ಶ್ರೀ ಎಂ. ವಿ. ಚಂದ್ರಶೇಖರಮೂರ್ತಿ ಮುಖ್ಯ ಅತಿಥಿಯಾಗಿ, ಶ್ರೀ ಶ್ರೀಗಳ ಚಿಂತನ ಹತ್ತಿರದಿಂದ ಮಾಡಿದ್ದೇನೆ. ರಾಷ್ಟ್ರದ ಸ್ವಾತಂತ್ರ-ಆರ್ಥಿಕ ಸ್ವಾವಲಂಬನೆ ಮಾಡಿದ್ದೇವೆ. ಆದರೆ ಸಮಾಜವನ್ನು ಸರಿಯಾದ ದಿಕ್ಕಿನಲ್ಲಿ ನಡೆಸುವಂತೆ ಧರ್ಮಪೀಠಗಳು ಶ್ರೀ ಶ್ರೀ ಗಳು ಮಾಡಬೇಕು. ಇವು ಸರ್ಕಾರಕ್ಕೆ ದಿಕ್ಸೂಚಿಯಾಗಬೇಕು. ಶ್ರೀ ಮಠ ದೇಶ ವಿದೇಶಗಳಲ್ಲಿ ಒಳ್ಳೆಯ ಹೆಸರು ಗಳಿಸಿದೆ. ಇಂಥಾ ಮಹಾ ಸಂಸ್ಥೆಗೆ ದುಷ್ಟ ಶಕ್ತಿಗಳನ್ನು ನಿಯಂತ್ರಿಸುವ ಶಕ್ತಿಯನ್ನು ದೇವರು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದರು.

ಯೋಜನಾ ಖಾತೆ ರಾಜ್ಯ ಸಚಿವ ಶ್ರೀ ಟಿ. ಎಂ. ಮಂಜುನಾಥ್, ಶ್ರೀ ಶೀ ಗಳ ಕಾಯಕದ ಫಲವಾಗಿ ಶ್ರೀ ಮಠ ರಾಷ್ಟ್ರದಲ್ಲಿ ಆದರ್ಶಪೀಠವಾಗಿದೆ. ವಿಭೂತಿ ಪುರುಷರು. ಭಾರತದ ಸನಾತನ ಧರ್ಮ ಎತ್ತಿ ಹಿಡಿದಿದ್ದಾರೆ. ಅವರ ಪಾದ

ಧೂಳಿಯಿಂದ ಕರ್ನಾಟಕದ ನೆಲ-ಜಲ ಪಾವನವಾಗಿದೆ. ಶ್ರೀಗಳ ಆದರ್ಶ ವ್ಯಕ್ತಿತ್ವ ಸಮಾಜಕ್ಕೆ ಜ್ಯೋತಿಯಾಗಿ ಬೆಳಗಲಿ ಎಂದು ಹಾರೈಸಿದರು.

ರೇಷ್ಮೆ ಖಾತೆ ರಾಜ್ಯ ಸಚಿವ ಡಾ|| ಜಿ ಪರಮೇಶ್ವರ, 12 ನೇ ಶತಮಾನದ ಆಧುನಿಕ ಬಸವಣ್ಣನಾಗಿದ್ದಾರೆ ಶ್ರೀ ಶ್ರೀ ಗಳು ಎಂದು ಹೆಮ್ಮೆಯಿಂದ ನುಡಿದರು. ಭಾರತಕ್ಕೆ ಬೇಕಾದದ್ದು ಮಾನವತ್ವದ ಮೂಲ. ಶ್ರೀ ಗಳ ಸಾನ್ನಿಧ್ಯದಲ್ಲಿ ನಾವು ಬದುಕುತ್ತಿರುವುದೇ ಪುಣ್ಯ. ಅವರ ಕೊಡುಗೆ ವಿಶ್ವಕ್ಕೇ ಮಾರ್ಗ ದರ್ಶನವಾಗಿದೆ. ರಾಜ್ಯದ-ತುಮಕೂರಿನ ಜನತೆ ಯಾವತ್ತೂ ಋಣಿಗಳಾಗಿರ ಬೇಕೆಂದು ಆಶಿಸಿದರು.

ಶ್ರೀ ಶ್ರೀ ಗಳ ವಜ್ರಮಹೋತ್ಸವ ಪತಿಷ್ಠಾನದ ಅಧ್ಯಕ್ಷರಾದ ಡಾ|| ಶ್ರೀ ಎಂ.ಸಿ. ಮೋದಿ, ಶ್ರೀ ಶ್ರೀ ಗಳು ಶಿಕ್ಷಣ, ಧರ್ಮ, ಸಾಂಸ್ಕೃತಿಕ ಕ್ಷೇತ್ರದಲ್ಲಿ ಮಹಾ ಕ್ರಾಂತಿ ಮಾಡಿದ್ದಾರೆ. ಇವರು ಸತ್ಯ ನಿಷ್ಠರು. ನಿಜವಾದ ಜಾತ್ಯಾತೀತ ಮಠ ಕಟ್ಟಿದ್ದಾರೆ. ಇಲ್ಲಿ ನಿರ್ಮಿಸುತ್ತಿರುವ ಬೃಹತ್ ಹಾಸ್ಟಲ್ ಮತ್ತು ಪ್ರಸಾದ ನಿಲಯ ವಿಶ್ವದಲ್ಲಿ ಎಲ್ಲೂ ಕಾಣಲಾಗುವುದಿಲ್ಲ ನಾಡಿನ ಜನತೆ ಈ ಪ್ರತಿಷ್ಠಾನ ಸ್ಮಾರಕಗಳಿಗೆ ಉದಾರ ವಾಗಿ ಸಹಾಯ ಮಾಡಬೇಕಾಗಿ ಕೋರಿದರು.

## ಗುರುವಂದನಾ ಮಹೋತ್ಸವದಲ್ಲಿ ಸನ್ಮಾನಿತರ ನುಡಿ.

1 ಶ್ರೀ ಎಂ. ಎಸ್. ಗುರುಪಾದಸ್ವಾಮಿ, ಮಾಜಿ ಕೇಂದ್ರ ಸಚಿವರು, ಮೈಸೂರು. ಆದರ್ಶ ಭಕ್ತಿಗೆ ಶ್ರೀ ಶ್ರೀಗಳು ಕೇಂದ್ರ ಬಿಂದು. 87 ವರ್ಷಗಳು ಅವರ ಜೀವನದಲ್ಲಿ ಮೈಲಿಗಲ್ಲುಗಳಾಗಿವೆ. ಸಾಮಾನ್ಯರು 1 ಗಂಟೆ ಅರ್ಥಪೂರ್ಣವಾಗಿ ಬದುಕಿದರೆ ಸಾರ್ಥಕ, ಡಯಾಜಿನೀಸ್ ವಿಚಾರವಾದಿ ಬೆಳಗಿನ ವೇಳೆ ದೀಪಹಿಡಿದು ಹೋಗುತ್ತಿದ್ದ. ಕೇಳಿದ್ದಕ್ಕೆ ಅವನಿಂದ ಬಂದ ಉತ್ತರ ಮಾನವೀಯತೆಯ ಮನುಷ್ಯ ರನ್ನು ಹುಡುಕಿಕೊಂಡು ಹೋಗುತ್ತಿದ್ದೇನೆ ನಿಜವಾದ ಮನುಷ್ಯರು ಶ್ರೀ ಶ್ರೀಗಳಾ-ಗಿದ್ದಾರೆ. ಇವರು ನಮ್ಮ ಭಾರತದ ದೀಪ. ಮಾನವೀಯತೆ ಇವರಲ್ಲಿ ತುಂಬಿದೆ. ಮಾನವರಲ್ಲಿ ಅತಿ ಮಾನವ ಶ್ರೇಷ್ಠಮಾನವರಾಗಿದ್ದಾರೆ. ಇವರು ಎಲ್ಲರ ಸಂಪತ್ತು. ಶ್ರೀಮಠಕ್ಕೆ ಯಾವ ಶ್ರೀಮಂತಿಕೆ ಇಲ್ಲ ಶ್ರೀಗಳವರ ವ್ಯಕ್ತಿತ್ವವೇ ಶ್ರೀಮಂತವಾದುದು ಕೋಟಿ ಕೋಟಿ ಭಕ್ತರನ್ನು ಸಂಪಾದಿಸಿದ್ದಾರೆ, ಆಚಾರ-ವಿಚಾರ ಎರಡನ್ನು ಬೆಳೆಸಿ ಕೊಂಡಿದ್ದಾರೆ. ದೇಶದಲ್ಲಿ ಅರಾಜಕತೆ ಇದೆ. ಇದಕ್ಕೆ ಪರಿಹಾರ ರಾಜಕೀಯದಿಂದಲ್ಲ. ಶ್ರೀ ಶ್ರೀಗಳ ಆದರ್ಶ ಪ್ರಸ್ತುತ ಬೇಕಾಗಿದೆ.

ಶ್ರೀ ಜೆಪ್ಪಿಯಾರ್, ಅಧ್ಯಕ್ಷರು, ಸತ್ಯಭಾಮ ಇಂಜಿನಿಯರಿಂಗ್ ಸಂಸ್ಥೆ ಮದ್ರಾಸ್.

ಶ್ರೀ ಸಿದ್ಧಗಂಗಾ ಮಠ ರಾಷ್ಟ್ರದಲ್ಲಿ ಆದರ್ಶವಾದ ಸ್ಥಾನ ಹೊಂದಿದೆ. ಅನ್ನ ದಾನದ ಮೂಲಕ ಶ್ರೀ ಶ್ರೀಗಳು ಪವಾಡ ಸದೃಶರಾಗಿದ್ದಾರೆ. ಗ್ರಾಮಾಂತರ ಪ್ರದೇಶದ ಮಕ್ಕಳಿಗೆ ಶಿಕ್ಷಣ ಕ್ಷೇತ್ರದಲ್ಲಿ ಶ್ರೀ ಮಠ ವರದಾನವಾಗಿದೆ ಎಂದು ಹೇಳಿದರು.

3. **ಡಾ॥ ಶ್ರೀ ಡಿ.ಎಂ. ನಂಜುಂಡಪ್ಪ**, ಉಪಾಧ್ಯಕ್ಷರು, ಕ. ರಾಜ್ಯ ಯೋಜನಾ ಮಂ. ಶ್ರೀ ಶ್ರೀ ಗಳಂಥ ಶ್ರೇಷ್ಠ ತಪಸ್ವಿಗಳ ಜನ್ಮದಿನಾಚರಣೆ ಆಚರಿಸುತ್ತಿರುವುದು ನಮ್ಮೆಲ್ಲರ ಭಾಗ್ಯ ವಿಶೇಷ. ಅವರಲ್ಲಿ ನಾವು ದೇವರನ್ನು ಕಾಣುತ್ತೇವೆ. ಕಾಯಕದ ರೂವಾರಿ ಯಾಗಿ ಕಲ್ಲು, ಮಣ್ಣನ್ನು ಹೊತ್ತು ಭವ್ಯ ಕಟ್ಟಡಗಳನ್ನು ಕಟ್ಟಿದ್ದಾರೆ. ಇಲ್ಲಿಯ ಬೃಹತ್ ದಾಸೋಹಕ್ಕೆ ಒಂದು ವರ್ಷಕ್ಕೆ 3 ಕೋಟಿ ರೂ ಖರ್ಚಾಗುತ್ತಿದೆ. ಅರ್ಥ ಶಾಸ್ತ್ರಜ್ಞನಾದ ನನಗೆ ಹೇಗೆ ಸಮದೂಗಿಸುತ್ತಾರೆ ಎಂದು ಆಶ್ಚರ್ಯವನ್ನುಂಟು ಮಾಡಿದೆ. ಇದು ಅವರ ತಪಸ್ಸಿನ ಫಲದಿಂದ ಸಾಧ್ಯವಾಗಿದೆ ಎಂದು ಹೇಳಿದರು.

4. **ವಿದ್ವಾನ್ ಶ್ರೀ ಎನ್. ರಂಗನಾಥಶರ್ಮ**, ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು, ಬೆಂಗಳೂರು. ಪೂಜ್ಯ ಮೂರ್ತಿ ಶ್ರೀ ಶ್ರೀ ಗಳವರ ಜನ್ಮ ದಿನ ಎಲ್ಲರೂ ಹೆಮ್ಮೆ-ಸಂತೋಷಪಡುವ ದಿನ, ನಾಡಿನ ಹಳ್ಳಿ ಹಳ್ಳಿಗಳಲ್ಲಿ ಅವರ ವ್ಯಕ್ತಿತ್ವ ಮತ್ತು ಸೇವಾ ಫಲದಿಂದ ಕೀರ್ತಿ ಹಬ್ಬಿದೆ. ಶಿವಕುಮಾರರಾಗಿ ಗಂಧದಂತೆ ತೇಯುತ್ತಿದ್ದಾರೆ.

ಶ್ರೀ ರಾಮನ, ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ದೃಷ್ಟಿಗೆ ಬೀಳದವರು ಅಧಮರು. ನಾನು ಧನ್ಯ. ಅವರ ವ್ಯಕ್ತಿತ್ವ-ದೃಷ್ಟಿಗೆ ಬಿದ್ದಿದ್ದೇನೆ.

ಅವರ ಪಾದಕ್ಕೆ ಒಂದು ಸಾರಿ ನಮಸ್ಕರಿಸಿದರೆ ಒಂದು ವರ್ಷ ಆಯುಸ್ಸು ಹೆಚ್ಚುತ್ತದೆ. ಎಂದು ಭಾವಿಸಿದ್ದೇನೆ. ಇಂಥ ಮಹಾತ್ಮರಿಗೆ ಬದುಕು-ನಿರ್ವಾಣ ಒಂದೇ ಎಂದು ಅಭಿಮಾನದಿಂದ ನುಡಿದರು.

5. **ಡಾ॥ ಶ್ರೀ ಷಡಕ್ಷರಸ್ವಾಮಿ**, ನಿವೃತ್ತ ಪ್ರಾಂಶುಪಾಲರು, ಸೆಂ. ಕಾ ಬೆಂ. ನಾನು ಇನ್ನೂ ಹೆಚ್ಚಿನ ಸೇವೆಯನ್ನು ಉತ್ಸಾಹ-ಸ್ಫೂರ್ತಿಯಿಂದ ಮಾಡಲು ಪೂಜ್ಯ ಶ್ರೀ ಶ್ರೀಗಳು ಆಶೀರ್ವಾದಿಸಿದ್ದಾರೆ ಎಂದು ಭಕ್ತಿಯಿಂದ ಪ್ರಣಾಮಗಳನ್ನು ಸಲ್ಲಿಸಿದರು.

ಲೋಕಸಭಾ ಉಪಸಭಾಧ್ಯಕ್ಷ ಶ್ರೀ ಎಸ್ ಮಲ್ಲಿಕಾರ್ಜುನಯ್ಯ, ಶಾಸಕ ಶ್ರೀ ಷಫಿ ಅಹಮದ್, ವಿಧಾನ ಪರಿಷತ್ ಸದಸ್ಯ ಶ್ರೀ ಟಿ. ಹೆಚ್. ನಾರಾಯಣಸ್ವಾಮಿ ಅವರುಗಳು ಮಾತನಾಡಿ ಸ್ವಾಮೀಜಿಗಳು ಶತಮಾನ ಕಾಲ ಬದುಕಬೇಕೆಂದು ಆಶಿಸಿದರು.

ಶ್ರೀ ಟಿ.ಕೆ. ನಂಜುಂಡಪ್ಪ ಸ್ವಾಗತಿಸಿದರು. ಶಿವಕುಮಾರಸ್ವಾಮಿ ಕಾರ್ಯಕ್ರಮ ನಿರೂಪಿಸಿದರು.



# ಬೇವು :– 'ರೋಗ ಮತ್ತು ಕೀಟನಾಶಕ'

ಹೆಚ್. ಗವಿಸಿದ್ದಯ್ಯ, ಶಿಕ್ಷಕರು, ಪ್ರೌಢಶಾಲೆ ಆವತಿ, ದೇವನಹಳ್ಳಿ ತಾ|| ಬೆಂಗಳೂರು ಜಿ||

"ಬೇವಿನ ಬೀಜವ ಬಿತ್ತಿ, ಬೆಲ್ಲದ ಕಟ್ಟೆಯ ಕಟ್ಟಿ ಆಕಳ ಹಾಲನೆರೆದು, ಜೇನು ತುಪ್ಪವ ಸುರಿದರೆ ಕಹಿಯಾಗುವುದಲ್ಲದೆ! ಸಿಹಿಯಾಗುವುದೆ!" ಎಂದು ಜಗಜ್ಯೋತಿ ಬಸವಣ್ಣನವರು ತಮ್ಮ ಸರಳವಾದ ವಚನದಲ್ಲಿ ಬೇವಿನ ಕಹಿಯ ಬಗ್ಗೆ ಹೇಳಿದ್ದಾರೆ. 'ಬೇವು ಕಹಿ' ಯಾದರೂ ಜೀವಿಗಳ ಆರೋಗ್ಯ; ವಸತಿಗಳ ನಿರ್ಮಾಣಕ್ಕೆ ಮುಂತಾದವುಗಳಿಗೆ ಅತ್ಯುತ್ತಮವಾದುದು. ಭಾರತ ಬೇವಿನಮರಗಳ ತವರುಮನೆ. ಇಲ್ಲಿನ ಮಣ್ಣು ಈ ಮರದ ಬೆಳವಣಿಗೆಗೆ ಬಹಳ ಉಪಯುಕ್ತವಾದುದು.

ಯಾವಾಗಲೂ ಹಸಿರಾಗಿರುವ ಈ ಮರ ಉಷ್ಣವಲಯ ದೇಶಗಳಲ್ಲಿ ಹೆಚ್ಚಾಗಿ ಬೆಳೆಯುತ್ತದೆ.

ಪೂತಿನಾಶಕವಾಗಿ ಆಯುರ್ವೇದದಲ್ಲಿ ವಿಶೇಷವಾದ ಸ್ಥಾನವನ್ನು ಆಕ್ರಮಿಸಿಕೊಂಡಿರುವ ಈ ಮರ ಮರಮುಟ್ಟು; ಸೌದೆ, ಎಣ್ಣೆ ಬೀಜಗಳು, ಪ್ರಾಣಿಗಳಿಗೆ ಆಹಾರ ಮುಂತಾದವುಗನ್ನೊದಗಿಸುವಲ್ಲಿ ವಿಶೇಷವಾದ ಪಾತ್ರವಹಿಸುತ್ತದೆ.

ಎಂತಹ ಮಣ್ಣಾದರೂ ಬೆಳೆಯಬಲ್ಲ ಈ ಮರ 20 ಮೀಟರ್ ಎತ್ತರದಿಂದ 2. 25 ಮೀಟರ್ ಅಗಲವಾಗಿ ಬೆಳೆಯಬಲ್ಲದು.

ಮಾರ್ಚಿ ಮತ್ತು ಮೇ ತಿಂಗಳಲ್ಲಿ ಚಿಗುರೊಡೆದು, ಬಿಳಿಬಣ್ಣದ ಸಣ್ಣಗಾತ್ರದ ಹೂಗಳನ್ನು ಬಿಡುವುದು. ಈ ಮರದ ಹಣ್ಣುಗಳು ಮೇ ಮತ್ತು ಆಗಸ್ಟ್ ತಿಂಗಳುಗಳಲ್ಲಿ ಮಾಗುವವು. ಸಾಮಾನ್ಯವಾಗಿ ಹಣ್ಣುಗಳು ಹಳದಿ ಮಿಶ್ರಿತ ಹಸಿರು ಬಣ್ಣವನ್ನು ಹೊಂದಿರುತ್ತವೆ.

ಧಾನ್ಯ ಕೆಡದಂತಿರಲು, ಬೇವಿನ ಒಣ ಎಲೆಗಳನ್ನು ಬೆರೆಸಿ ಶೇಖರಿಸಿಡುವರು.

ಬೇವಿನ ಬೀಜಗಳಿಗೆ ಹಾನಿಕಾರಕ ಕೀಟಗಳನ್ನು ಹಿಮ್ಮೆಟ್ಟಿಸುವ ಶಕ್ತಿಯಿದೆ, ಎಂದು ಕೃಷಿ ಸಂಶೋಧನಾ ವಿಜ್ಞಾನಿಗಳು ಕಂಡುಹಿಡಿದಿದ್ದಾರೆ.

ಉಪ ದ್ರವಿಕಾರಿ ಕೀಟಗಳನ್ನು ಹತೋಟಿಯಲ್ಲಿಡುವಲ್ಲಿ ಬೇವು ಪರಿಣಾಮಕಾರಿಯಾಗಿ ವರ್ತಿಸುವುದು. ಬೇವಿನ ಬೀಜಗಳನ್ನು ಔಷಧಿಗಳ ತಯಾರಿಕೆಯಲ್ಲಿ ವಿಶೇಷ ಉಪಯೋಗಿಸುತ್ತಾರೆ. ಮತ್ತೊಂದು ಮುಖ್ಯವಾದ ಅಂಶವೆಂದರೆ, ಬೇವಿನ ಎಣ್ಣೆಯನ್ನು ಸ್ಥೂಲ ದೇಹದ, ಮಧು ಮೇಹ ರೋಗದಿಂದ ನರಳುತ್ತಿರುವವರಿಗೆ, ಆ ರೋಗವನ್ನು ಹತೋಟಿಯಲ್ಲಿಡಲು ಬಳಸುತ್ತಾರೆ.

ಇನ್ನು ಬೇವಿನ ಎಲೆಯ ರಸದಿಂದ ಗಾಯಗಳನ್ನು ತೊಳೆದರೆ, ಅದು ಪೂತಿ ನಾಶಕವಾಗಿ ವರ್ತಿಸಬಲ್ಲದು. ಅಲ್ಲದೆ ಈ ರಸವನ್ನು ಚರ್ಮ ರೋಗ ಮತ್ತು ಹುಣ್ಣು ಮುಂತಾದವುಗಳನ್ನು ಗುಣಪಡಿಸಲು ಉಪಯೋಗಿಸುವರು.

ಬೇವಿನ ತೊಗಟೆಯು, ಜ್ವರ ನಿವಾರಕಮಾತ್ರವಲ್ಲದೆ, ಮಲೇರಿಯಾವನ್ನೂ ಸಹ ತಡೆಗಟ್ಟ ಬಲ್ಲದು.

ವಾಯು ಮಾಲಿನ್ಯವನ್ನು ಶುದ್ಧೀಕರಿಸಿ ಹೆಚ್ಚು ಆಮ್ಲಜನಕವನ್ನೊದಗಿಸುವ, ಈ ಮರ "ಬೇಸಿಗೆ ದಿವಸಕ್ಕೆ ಬೇವಿನ ಮರ ತಂಪು" ಎನ್ನುವ ಜಾನಪದ ಗೀತೆಯಂತೆ ಈ ಮರದ ನೆರಳು ತಂಪಾಗಿರುವುದಲ್ಲದೆ, ಆರೋಗ್ಯಕರವಾಗಿರುತ್ತದೆ.

ಮತ್ತೊಂದು ವಿಶೇಷತೆ ಎಂದರೆ ಗೆದ್ದಲುಹುಳುಗಳಿಂದ ಮುಕ್ತವಾದ ಈ ಮರವನ್ನು ಗೃಹ ನಿರ್ಮಾಣದ ಸಾಮಾನುಗಳಾಗಿ ಬಳಸಿದಾಗ ದೀರ್ಘಕಾಲ ಬಾಳಿಕೆ ಬರುವುದು.

ಮತ್ತೊಂದು ವಿಶೇಷತೆಯೆಂದರೆ, ಈ ಮರದಿಂದ ಉದುರುವ ಎಲೆ, ಹೂವು ಮುಂತಾದವುಗಳು ಒಳ್ಳೆಯ ಗೊಬ್ಬರವೂ ಹೌದು.

ಬೇವಿನ ಮರದಿಂದ ತೆಗೆಯುವ ಎಣ್ಣೆಯು ಅನೇಕ ಆಮ್ಲಗಳನ್ನು ಹೊಂದಿರುವುದರಿಂದ ಕ್ರೀಮ್, ಶ್ಯಾಂಪೂ, ಟೂತ್ ಪೇಸ್ಟ್, ಸಾಬೂನು ಮುಂತಾದವುಗಳನ್ನು ತಯಾರಿಸ ಬಹುದು. ಜೊತೆಗೆ ತಲೆಯ ಹೊಟ್ಟನಿಂದಲೂ ಸಹ (dandruff) ಮುಕ್ತರಾಗಬಹುದು.

# ಕಾರಣ ಪುರುಷ ಬಸವೇಶ್ವರ ಭಾಗ–೫

## ರಾಜ್ಯದ ಬೊಕ್ಕಸ ಮತ್ತು ಬಸವಣ್ಣ ಭಾಗ-೧೧ (ಹಿಂದಿನ ಸಂಚಿಕೆಯಿಂದ)

ನಾನು ಪರಸೇವೆಯ ಮಾಡುವೆನಯ್ಯ ಜಂಗಮ ದಾಸೋಹಕ್ಕೆಂದು
ಊರ ಮುಂದೆ ಹಾಲಹಳ್ಳ ಹರಿವುತ್ತಿರಲು ಓರೆಯಾವಿನ ಬೆನ್ನಲೋಡಲೇಕಯ್ಯಾ?
ಊರ ಮುಂದೆ ಹಾಲಹಳ್ಳ ಹರಿವುತ್ತಿರಲು ಬಿಜ್ಜಳನ ಭಂಡಾರವೆನಗೇಕಯ್ಯಾ?
ಇದು ಚಾಡಿಕಾರರಿಗೆ ಬಸವಣ್ಣನ ಖಂಡ ತುಂಡ ಉತ್ತರ.

ಬಸವಣ್ಣನ ಮಹಾಮನೆಗೆ ಬರುವ ಶರಣರು ಕಾಯಕವನ್ನು ಮಾಡಿ, ಸಸ್ವಾರ್ಜಿತದಿಂದ ಧನವನ್ನು ಗಳಿಸಿದವರು ಎಂದು, ಬಸವಣ್ಣನೇ ಸಸ್ವಾರ್ಜಿತವನ್ನಲ್ಲದೆ ಶಿವನುಬಲ್ಲ ಎಂದು ಬಸವಣ್ಣನೇ ತಿಳಿಸಿದ್ದನು. ಗುರುವಾದರೂ ಕಾಯಕ ಮಾಡಬೇಕು.

ಶಿವಾನುಭವ ಮಂಟಪದಲ್ಲಿ ಅವರು ಬಂದು ಸೇರುತ್ತಿದ್ದುದು ಆಲಸಿಗಳ ಕಾಡು ಹರಟೆಗಾಗಿಯಲ್ಲ; ಅಂದಂದಿನ ಕಾಯಕ ಮಾಡಿಯೇ ದುಡಿತ ಧನವನ್ನು ಈ ಶಿವಾನುಭವಗೋಷ್ಠಿಗಾಗಿ ತರುತ್ತಿದ್ದಿರಬೇಕು.

ಆಶನವ ಮರೆದಾತ, ವ್ಯಸನವ ತೊರೆದಾತ ಆದ ಅಲ್ಲಮನೊಬ್ಬನೇ ಬಹುಶಃ ದೈಹಿಕ ದುಡಿತ ಮಾಡುತ್ತಿರಲಿಲ್ಲ. ಊರ ಮುಂದೆ ಹಾಲಹಳ್ಳ ಹರಿವುದು ಸಹಾ ಶಿವಶರಣರು ತರುವ ಧನ ಧಾನ್ಯಗಳನ್ನು ಸೂಚಿಸಬಹುದು.

" ಹರನೀವ ಕಾಲಕ್ಕೆ ಸಿರಿಯು ಬೆನ್ನಲಿ ಬಕ್ಕು
ಹರಿದು ಹೆದ್ದೊರೆಯು ಕೆರೆ ತುಂಬಿದಂತಯ್ಯಾ........"
ಹರಸ್ವರೂಪರಾದ ಶಿವಶರಣರು ಬರಿಗೈಯಿಂದ ಬರುತ್ತಿರಲಿಲ್ಲ

" ಕಾಯಕವೇ ಕೈಲಾಸವಾದ ಕಾರಣ ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು' ಎಂದು ಶರಣೆ ಲಕ್ಕಮ್ಮ ತಿಳಿಸಿದ್ದಳು. ಪ್ರಭುಲಿಂಗಲೀಲೆಯ ಪ್ರಕಾರ ಉಂಡಾಡಿಗಳ ಮೇಲೆ ಬಂಕದೆರೆಯನ್ನು ಬಸವಣ್ಣನು ಹಾಕಿದ್ದಿರಬೇಕು.

ಬಸವಣ್ಣ ಭವಿ ಬಿಜ್ಜಳನನ್ನು ಓಲೈಸುತ್ತಿದ್ದನು ಎಂದು ಪ್ರಮಥರೇ ಆರೋಪಿಸಿದಂತಿದೆ. ಬಸವಣ್ಣ ಕೊಟ್ಟ ಉತ್ತರವು ತುಂಬಾ ಮಾರ್ಮಿಕವಾಗಿದೆ........ ಕೊಡುವೆನುತ್ತರವನವರಿಗೆ, ಕೊಡಮ್ಮೆನು. ಹೊಲೆ ಹೊಲೆಯರ ಮನೆಯ ಹೊಕ್ಕಾಡಡೆಯೂ ಸಲೆ ಕೈ ಕೂಲಿಯಾ ಮಾಡಿಯಾದಡೆಯೂ ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನವಸರಕ್ಕೆ ಕುದಿದೆನಾದಡೆ ತಲೆ ದಂಡ.

ಸದ್ಗುಣಗಳಲ್ಲಿ ಮದ ಕಾಮ ಮತ್ಸರ ಕ್ರೋಧ ಮನೋವ್ಯಾಪಾರಗಳು ಭವಿ ಎಂದು ಬಸವಣ್ಣನೇ ಭವಿಶಬ್ದದ ವಿವರಣೆಯನ್ನಿತ್ತಿದ್ದನು. ಪುನಃ ಹುಟ್ಟುವವ ಭವಿ ಎಂಬುದು ಈ ಶಬ್ದದ ಇನ್ನೊಂದು ಅರ್ಥ.

ಬಸವಣ್ಣನು ಬಿಜ್ಜಳನ ಭಂಡಾರದಲ್ಲಿದ್ದ ಹಣವನ್ನೆ ತೆಗೆದುಕೊಂಡು ಬೇಡಿದ- ವರಿಗೆಲ್ಲ ದಾನ ಮಾಡುತ್ತಿದ್ದ ಎಂದು ಹರಿಹರ ಭೀಮಕವಿ ಮುಂತಾದವರು ತಿಳಿಸಿದ್ದರು.

ಕೊಂಡೆಯದವರ ಚಾಡಿಯನ್ನು ಅನುಲಕ್ಷಿಸಿ ಬಿಜ್ಜಳನು ಆಕ್ಷೇಪಿಸಿದಾಗ.

ಎಲ್ಲೈ ಸಜ್ಜನರನರಿಯದ ಬಿಜ್ಜಳಭೂಪ
ತವೊಮ್ಮಡವೆಯುಂ ತಾವು ಕೊಂಡಪರು

ಎಂದು ಹೇಳಿ, ರಾಜ್ಯದ ಬೊಕ್ಕಸದಿಂದ ಪ್ರಜೆಗಳಿಗೆ ತೆಗೆದುಕೊಳ್ಳುವ ಹಕ್ಕಿದೆ ಯೆಂದು ಬಸವಣ್ಣನವರು ಹೇಳಿದರು ಎಂದು ಡಾ|| ಬಿ. ಸಿ. ಜವಳಿಯವರು ಬರೆದಿದ್ದಾರೆ.

ಆದರೆ ಹೀಗೆ ಯುಕ್ತಾಯುಕ್ತ ವಿವೇಚನೆಯಿಲ್ಲದೆ ಭಂಡಾರದ ಹಣವನ್ನು ದಾನ ಮಾಡಿ ಬರಿದು ಮಾಡುತ್ತಿದ್ದ ಎಂದು ನಂಬಲು ಸಾಧ್ಯವಾಗದು.

ಸ್ವಹಸ್ತೇನ ದಾನಂ ಪರಹಸ್ತೇನ ದಂಡನಂ ಎಂಬ ಸಂಸ್ಕೃತದ ಸುಭಾಷಿತ ವಿರುವಂತೆ ತನ್ನ ಹಣವನ್ನೇ ದಾನ ಮಾಡುತ್ತಿದ್ದಿರುವುದೇ ಹೆಚ್ಚು ಸಂಭವನೀಯ ವಾಗಿದ್ದಿತು.

ಸಂಸಾರಗಳಲ್ಲಿ ಅತಿಶಯ ಅಪೂರ್ವವಾದ ಅಸಂಗ್ರಹತೆಯನ್ನು ಕೈಕೊಂಡಿದ್ದುದು ಸ್ಪಷ್ಟವಾಗುತ್ತದೆ.

ಹೊನ್ನಿನೊಳಗೊಂದರೆಯ ಸೀರೆಯೊಳಗೊಂದೆಳೆಯ
ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ (ಡೆ)
ನಿಮ್ಮಾಣೆ ನಿಮ್ಮ ಪುರಾತನಣರಾ

ಎಂದು ಹೇಳಿದ ಬಸವನು ನಿಃಸ್ಪೃಹ ವ್ಯಕ್ತಿತ್ವವುಳ್ಳ ಸತ್ಯವಂತನಾಗಿದ್ದನು. ಸತ್ಯವ ನುಡಿವುದೆ ಸ್ವರ್ಗಲೋಕ ಎಂದು ಸಾರಿದ ಬಿಜ್ಜಳನ ಭಂಡಾರದಿಂದ ಬೇಕಾದಂತೆ ಹಣವನ್ನು ಎತ್ತಿರಲಿಕ್ಕಿಲ್ಲ.

# ಪ್ರಭುದೇವರ ವಚನಗಳಲ್ಲಿ "ಜೀವನ ಸಾಫಲ್ಯ"

ದತ್ತಾತ್ರೇಯ ಪಾಟೀಲ, ಕವಲೂರು ಅಂಚೆ, ಕೊಪ್ಪಳ ತಾ||, ರಾಯಚೂರು. ಜಿಲ್ಲೆ.

ಜೀವನ ಸಾಫಲ್ಯದ ರಹಸ್ಯವನ್ನು ಕುರಿತಾದ ಉಕ್ತಿಗಳು ಭಾರತೀಯ ಸಾಹಿತ್ಯದಲ್ಲಿ ಹೇರಳ. ಶೃತಿ, ಸ್ಮೃತಿ, ಸುಭಾಷಿತಗಳಲ್ಲಿ ಈ ಬಗೆಗಿನ ವಿವರಣೆ ಚಿಂತನೆಯ ನಿದರ್ಶನಗಳು ನಮಗೆ ಲಭಿಸುವಂತೆ; ಅನೇಕ ಜನ ಸಾಧುಸಂತರು, ತತ್ವಾನ್ವೇಷಕರು, ಹಾಗೂ ಲೌಕಿಕ ಮತ್ತು ಅಲೌಕಿಕ ಗುಂಪಿಗೆ ಸೇರಿದ ಕವಿ ವರೇಣ್ಯರು ತಮ್ಮದೇ ಅನುಭವದ ಸ್ತರದ ಮೇಲೆ ಜೀವನ ಸಾಫಲ್ಯ ಕುರಿತು ಪರಿಭಾವಿಸಿದ್ದಾರೆ. ಮಾನವ ತನ್ನ ಜೀವನ ಸಾಫಲ್ಯ ಗೊಳಿಸಬೇಕಾದಲ್ಲಿ ಮೂರು ಮುಖ್ಯವಾದ ಕಾರ್ಯಗಳನ್ನು ಮಾಡಬೇಕೆಂದು ನಮ್ಮ ಹಳೆಯ ಅನುಭವದ ಮಾತೊಂದು ಕೇಳಿಬರುತ್ತದೆ. ಒಂದು ಪುಸ್ತಕವನ್ನಾದರೂ ಬರೆಯಬೇಕು, ಇಲ್ಲವೆ ಒಂದು ಗಿಡವನ್ನಾದರೂ ನೆಡಬೇಕು, ಅದು ಆಗದಿದ್ದ ಪ ಕ್ಷದಲ್ಲಿ ಒಂದು ಗಂಡು ಮಗು ವನ್ನಾದರೂ ಹಡೆಯಬೇಕು ಎಂಬುದು ನಮ್ಮ ಜನಪದ ಸಾರ್ಥಕ ಬದುಕಿನ ಗುಟ್ಟು.

ಜೀವನದ ನಿಗೂಢ ರಹಸ್ಯ ಹಾಗೂ ಅದರ ಸಾಫಲ್ಯದ ಬಗೆಗಿನ ಚಿಂತನೆಯ ಮಾರ್ಗದಲ್ಲಿ ವಚನಕಾರರ ಜೀವನಾನುಭವದ ವೈಶಿಷ್ಟವೇ ಬೇರೆ. ಅಂತೆಯೇ ಅಲ್ಲಮ ಪ್ರಭುಗಳ ವಚನಗಳಲ್ಲಿ ಮಾನವ ಬದುಕಿನ ಸಾರ್ಥಕತೆ ಸಂಪೂರ್ಣ ಪಾರಮಾರ್ಥಿಕ ದಲ್ಲಿಯೇ ಅಡಗಿದೆ ಎಂಬುದು ವಿದಿತವಾಗುತ್ತದೆ. ಭಾರತೀಯ ಅಧ್ಯಾತ್ಮದ ಆವಿಷ್ಕಾರದ ಹಿನ್ನೆಲೆಯಲ್ಲಿ ಜೀವನ ಸಾಫಲ್ಯ ಎಲ್ಲಿದೆ? ಎಂಬುದನ್ನು ಪ್ರಭುದೇವರ ವಚನಗಳು ಸ್ಪಷ್ಟಪಡಿಸುತ್ತವೆ.

ಮುಂದು ಜಾವದಲೆದ್ದು ಲಿಂಗದಂಘ್ರಿಯಮುಟ್ಟಿ
ಸುಪ್ರಭಾತ ಸಮಯದಲಿ ಸದ್ಭಕ್ತರ ಮುಖವ ನೋಡುವದು।
ಹುಟ್ಟಿದುದಕ್ಕಿದೆ ಸಫಲನೋಡಾ।
ಸತ್ಯ ವಚನವಿಂತೆಂದುದು।
ಇದಿಲ್ಲದವರ ನಾನೊಲ್ಲೆ ಗುಹೇಶ್ವರಾ ||

ಸದ್ಭಕ್ತನು ಪ್ರಾತಃಕಾಲದಲ್ಲಿ ಎದ್ದು ಲಿಂಗದೇವನಿಗೆ ವಂದಿಸಬೇಕು. ಆ ಸುಪ್ರ ಭಾತದಲ್ಲಿಯೇ ಲಿಂಗಪೂಜೆಯನ್ನು ಮಾಡಿ ಸದ್ಭಕ್ತರ ದರ್ಶನಪಡೆಯುವದೇ ಮಾನವ ನಾಗಿ ಹುಟ್ಟಿದ್ದಕ್ಕೆ ಸಾರ್ಥಕ ಎಂದು ಹೇಳುತ್ತಾರೆ. ಶಿವಶರಣರಿಗೆ ಶರಣೆನ್ನುವಲ್ಲಿಯೇ ಭಕ್ತನಿಗೆ ಸಫಲತೆ ಸಾಧ್ಯವಿದೆ. ಹೀಗೆ ದಾಸೋಹಂಭಾವದಿಂದ ನಡೆವುದು ಸತ್ಕರ್ಮ ಈ ಕ್ರಮವಿಲ್ಲದೇ ಮಾಡುವದೆಲ್ಲವೂ ವ್ಯರ್ಥವೆನಿಸುವದು. ಇಂಥ ಸತ್ಕರ್ಮವಿಲ್ಲದ ಭಕ್ತನಿಗೆ ಗುಹೇಶ್ವರನ ಕರುಣೆಯಾಗಲಾರದು. ನಾವು ಪ್ರಭಾತ ಸಮಯದಲ್ಲಿ ಎದ್ದು ದರ್ಶನ ಪಡೆಯುವ ಸದ್ಭಕ್ತನ ಲಕ್ಷಣಗಳನ್ನು ಕುರಿತು ಪ್ರಭುದೇವರು ಮಾರ್ಮಿಕವಾಗಿ ವಿವರಿಸಿದ್ದಾರೆ.

ಆಚಾರವನರಿಯದೆ ವಿಭವವಳಿಯುದೆ
ಕೋಪವಡಗದೆ ತಾಪ ಮುರಿಯದೆ
ಬರಿದೆ ಭಕ್ತರಾದೆವೆಂದು ಬೆಬ್ಬನೆ ಬೆರೆವವರ
ಕೇಡಿಂಗೆ ನಾನು ಮರುಗುವೆ ಕಾಣಾ ಗುಹೇಶ್ವರ

ಅಂಗದ ಮೇಲೆ ಲಿಂಗಸ್ವಾಯುತವಾದ ಬಳಿಕ ಆಚಾರವೇ ಪ್ರಾಣವಾಗಬೇಕು. ಲಿಂಗವನ್ನಲ್ಲದೆ ಅನ್ಯವನರಿಯದಿಪ್ಪ ಲಿಂಗಾಚಾರವನ್ನು ಶಿವಭಕ್ತರೆಲ್ಲ ಒಂದೆಂಬ ಶಿವಾ-ಚಾರವನ್ನು ತತ್ವನಿಷ್ಠೆಯೆಂಬ ಗಣಾಚಾರವನ್ನು ಹೀಗೆ ಪಂಚಾಚಾರಗಳ ಮರ್ಮವನ್ನು ಅರಿಯಬೇಕು. ಶಿವಭಕ್ತರಲ್ಲಿ ಕೋಪ, ಸಾಂಸಾರಿಕ ತಾಪಗಳು ಅಳಿದು ಹೋಗಬೇಕು. ಅಂದಾಗ ಭಕ್ತನೆನಿಸುವನು ಎಂದು ಹೇಳುತ್ತಾರೆ.

ಆಸೆಗೆ ಸತ್ತುದು ಕೋಟಿ
ಆಮಿಷಕ್ಕೆ ಸತ್ತುದು ಕೋಟಿ
ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ
ಗುಹೇಶ್ವರಾ, ನಿಮಗಾಗಿ ಸತ್ತವರಾರನೂ ಕಾಣೆ

ಆಸೆ ದುರಾಸೆಯಿಂದ ಸಾಯುವವರ ಸಂಖ್ಯೆ ಹೆಚ್ಚು. ವಿಷದ ಭೋಗವೇ ತಮ್ಮ ಬದುಕಿನ ಗುರಿ ಎಂದು ಭಾವಿಸಿ ಆಮಿಷಕ್ಕಾಗಿ ಜೀವನವನ್ನು ಕಳೆದುಕೊಂಡವರು ಅಪಾರ. ಹೆಣ್ಣು ಹೊನ್ನು ಮಣ್ಣಿಗಾಗಿ ಹೋರಾಡಿ ಸತ್ತವರೂ ಅಸಂಖ್ಯ. ದೇವನಿಗಾಗಿ ಹಂಬಲಿಸಿ ತಮ್ಮ ಜೀವನವನ್ನು ಮುಡುಪಾಗಿಸಿಕೊಳ್ಳುವಲ್ಲಿ ಮಾನವನ ಜೀವನ ಸಾಫಲ್ಯವಿದೆ ಎಂದು ವಿವರಿಸುತ್ತಾರೆ.

ಸಂಚಿತ ಕರ್ಮದಿಂದಾಗಿ ಹಿಂದಣ ಮರವೆಯಿಂದಾಗಿ ಹೇಗೋ ಮರ್ತ್ಯಕ್ಕೆ ಬಂದು ನೊಂದದ್ದೂ ಆಯಿತು. ಇನ್ನು ಒಲ್ಲೆನೊಲ್ಲೆ ಮರ್ತ್ಯದಹಂಗ. ಇನ್ನರಿತು ಕೊಂಡು ತ್ರಿವಿಧ ಪಾಶವ ಹರಿಯದೆ ಐಹಿಕ ಸುಖವನ್ನು ಮನದಲ್ಲಿ ತಂದೆನಾದಡೆ ನಿಮ್ಮಾಣೆ ಗುಹೇಶ್ವರಾ ಎಂದು ಹೇಳುತ್ತಾರೆ. ಹೆಣ್ಣು ಮಣ್ಣುಗಳೇ ಪ್ರಾಣವಾಗಿ ಆ ಸುಖದ ಸೊಕ್ಕಿನಲ್ಲಿ ತೇಲಾಡುತ್ತ ಭವದುಃಖವೆಂಬ ಕ್ರೂರ ಜನ್ಮದಲ್ಲಿ ಸಿಕ್ಕಿಹಾಕಿ ಕೊಂಡು ತೊಳಲಾಡುವ ಅಜ್ಞಾನ ಜೀವಿಗಳ ಬದುಕು ನಿರರ್ಥಕವೆಂದು ಸಾರುತ್ತಾರೆ. ಭಾರತೀಯ ಆಧ್ಯಾತ್ಮಕ್ಕೆ ಸಂಸ್ಕೃತಿಯ ಸಮುನ್ನತಿಗೆ, ಜೀವನೌನ್ನತ್ಯ ಸಾಧನೆಗೆ ಅಲ್ಲಮ ಪ್ರಭುಗಳು ದಾರಿದೀಪವಾದಂತೆ, ಧಾರ್ಮಿಕ, ದಾರ್ಶನಿಕ ಯೌಗಿಕ ಪುರುಷ ರೆನಿಸಿ ಮಾನವನ ಸಾರ್ಥಕ ಬದುಕಿನ ಯಥಾರ್ಥ ಜ್ಞಾನವಮಾಡಿ ಕೊಡುತ್ತಾರೆ.

"ಮಾಟಕೂಟ" ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ "ಮಾಡಿಪೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ
ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ
ನಿಂದಿರಲೊಲ್ಲ ಕೂಡಲಸಂಗಮ ದೇವಾ.

—ಶ್ರೀ ಬಸವೇಶ್ವರ

# ಬಸವತತ್ತ್ವ ರತ್ನಾಕರ–24
## (ವಚನಕಾವ್ಯ ಸುಧಾಕರ)

ಮೋಟಗಿ ಮಲ್ಲಿಕಾರ್ಜುನ, "ಕನ್ನಡ ಕವಿ ಕಾಳಿದಾಸ'', ಅಥಣಿ–591304, ಬೆಳಗಾವಿ ಜಿಲ್ಲೆ.

**ಶೀಲವಾವುದು ?** (222)

"ಶೀಲ ಶೀಲವೆಂದು ಹಮ್ಮಿನಿಂ ನುಡಿವಿರಿ:
ಶೀಲವಾವುದೆಂದರಿಯಿರಿ.
ಇದ್ದುದ ವಂಚನೆಯ ಮಾಡದಿಹುದೆ ಶೀಲ;
ಇಲ್ಲದುದ ಕಡನ ಬೇಡದಿಹುದೆ ಶೀಲ;
ಪರಧನ-ಪರಸ್ತ್ರೀಗೆಳಸದಿಹುದೆ ಶೀಲ;
ಪರದೈವಂಗಳಿಗೆರಗದಿಹುದೆ ಶೀಲ;
ಶಿವನಿಂದೆಯ ಕೇಳದಿಹುದೆ ಶೀಲ;
ಗುರು ನಿಂದೆಯ ಕೇಳದಿಹುದೆ ಶೀಲ;
ಜಂಗಮ ನಿಂದೆಯ ಕೇಳದಿಹುದೆ ಶೀಲ;
ಶ್ರೀಶೈಲಮಲ್ಲಿಕಾರ್ಜುನಯ್ಯನ ಶರಣರ
ಬರವಿಂಗೆ ಎದುರಾಗಿ ಎರಗಿ ಆನಂದ ತೃಪ್ತಿ
ಪಡೆಯಬಲ್ಲುದೆ ಅಚ್ಚ ಶೀಲ.

**ಲಿಂಗಾಯತ ಧರ್ಮ ಶಾಸನ** (223)

ಭಕ್ತನು ತನ್ನ ಅಂಗದ ಮೇಲಿನ ಇಷ್ಟಲಿಂಗವನ್ನು,
ಮರಣಾಂತ್ಯದವರೆವಿಗೂ ತ್ಯಜಿಸಲಾಗದು ನೋಡಾ !
ಅದೆಂತಹ ತಪೋನಿಷ್ಠನಾಗಿ ಮಹಾತಪಸ್ವಿಯೆನಿಸಿ,
ತ್ರಿಕಾಲ ಜ್ಞಾನಿಯಾಗಿರ್ದಡು ಇಷ್ಟಲಿಂಗವನತಿಗಳೆಯಲಾಗದು ನೋಡಾ!
ಒಂದಂಗ ಭವಿಯಾದವಂಗೆ ಭವಹಿಂಗದು ನೋಡಾ!
ಭೂಮಿಗೆ ಜೀವಾತ್ಮ ಜನಿಸಿ ಬರುವ ಮುನ್ನವೆ-ಜನನಿಯ ಗರ್ಭಕ್ಕೆ
ಸದ್ಗುರು ಲಿಂಗಧಾರಣ ಮಾಡಿ, ಪಿಂಡಕಾಯ
ಪರಿಶುದ್ಧಗೊಳಿಸಿ ಲಿಂಗಕಾಯ ಗೆಯ್ವ;
ಹುಟ್ಟುವ ಈ ಲಿಂಗ ಕಾಯವೇ ಲಿಂಗೋದ್ಭವ ಕಾಯ! ನೋಡಾ!
ಅದು ಕಾರಣ ಭೂಮಿಯ ಮೇಲೆ ಕಾಯಧರಿಸಿ ಬಂದಂದಿನಿಂದ

ಭಕ್ತಸ್ಥಲ ಮೊದಲು ಐಕ್ಯಸ್ಥಲ ಕಡೆಯಾಗಿಪ್ಪ ಮಹಾನುಭಾವಿ ಶರಣನು
ದೇಹಾವಸಾನದ ಕಾಲದವರೆವಿಗೂ ಅಗಲದೆ ಇಷ್ಟಲಿಂಗವಧರಿಸಬೇಕು ನೋಡಾ!
ಷಟ್‌ಸ್ಥಲ ಜ್ಞಾನ ಸಂಪನ್ನನಾದಡು ಕ್ರಿಯಾನಿಷ್ಠೆಯನುಳಿದಿರಲಾಗದು ನೋಡಾ!

ಕೊನೆಯ ಸಮಾಧಿ ಕ್ರಿಯೆಯ ಸಮಯದಲ್ಲೂ "ಲಿಂಗೈಕ್ಯ" ಶರಣನ
ಅಂಗಕ್ಕೆ ಇಷ್ಟಲಿಂಗವಿರುತ್ತಿದೆಯಾದ ಕಾರಣ ಈ ಲಿಂಗ ದೇಹಿಗೆ ಮಾತ್ರ
ವೀರಶೈವಾಚಾರ (ಲಿಂಗಾಯತ) ಸಮಾಧಿ ಸಂಸ್ಕಾರಗಳು ಬಿಡದೆ ಮಾಳ್ಪದು
ನೋಡಾ!

ಇದು ಅನಾದಿ ಶರಣ, ಷಟ್‌ಸ್ಥಲಾಚಾರ್ಯ, ಪರಮ ಜಗದ್ಗುರು,
ಮಹಾನುಭಾವಿ, ವಿಶ್ವ ವಿಭೂತಿ, ಭಕ್ತಿಭಂಡಾರಿ ಶ್ರೀ ಬಸವೇಶ್ವರ ದೇವರು
ನಿರೂಪಿಸಿದ "ಲಿಂಗಾಯತಧರ್ಮಕಟ್ಟಳೆ"ಯಿದು
ಕೇಳಾ! ಶ್ರೀಶೈಲಮಲ್ಲಿಕಾರ್ಜುನ!

## ಭಕ್ತಾಧಿಕ್ಯ (224)

ಸಕಲ ಸಿದ್ಧಿಪುರುಷನೆಂದು ಪಕ್ಷಿಗಳಂತೆ ಖೇಚರದಲ್ಲಿ ಹಾರಾಡಿದೊಡೆ, ಹಿರಿಯನೆನಬಹುದೆ?
ಮತ್ಸ್ಯಗಳಂತೆ ಜಲದಲ್ಲಿ ಚರಿಸಿದೊಡೆ, ಹಿರಿಯನೆನಬಹುದೆ ?
ಮೃಗಾದಿಗಳಂತೆ ಭೂಪ್ರದಕ್ಷಿಣೆ ಮಾಡಿದೊಡೆ, ಹಿರಿಯ ನೆನಬಹುದೆ ?
ಡೊಂಬರಂತೆ ಅಗ್ನಿಸ್ತಂಭಾದಿಗಳ ಸಾಧಿಸಿದೊಡೆ, ಹಿರಿಯ ನೆನಬಹುದೆ ?
ಇದು ಹಿರಿದು-ಕಿರಿದಿನ ಪರಿಯಲ್ಲ ನೋಡಾ!

ಸದ್ಗುಣ-ಸದ್ಧರ್ಮ-ಸುನೀತಿ-ಶಿವ ಭಕ್ತಿ ಶಿವಾಚಾರ
ಶೀಲವ ಸಾಧಿಸಿದ ಸದ್‌ಭಕ್ತನೇ-ಸಚ್ಚಿದಾನಂದರೂಪನೇ
ಹಿರಿಯನೆಂಬೆ ಕೇಳಾ! ಭಕ್ತಬಂಧು! ಕರುಣಾಸಿಂಧು!
ಮಹಾಲಿಂಗ ಪ್ರಭುವೆ-ಶ್ರೀಶೈಲಮಲ್ಲಿಕಾರ್ಜುನ !

## ಗುಣಗ್ರಹಣ ಶಕ್ತಿ 225

ಸಿಹಿಯ ಗುಣವ ಇರುವೆ ಬಲ್ಲುದಯ್ಯಾ.
ವೇಳೆಯ ಗುಣವ ಕೋಳಿ ಬಲ್ಲುದಯ್ಯಾ.
ಗೋತ್ರದ ಗುಣವ ಕಾಗೆ ಬಲ್ಲುದಯ್ಯಾ.
ಮಾನವರಾಗಿ ಹುಟ್ಟಿ ಶಿವಜ್ಞಾನಿಗಳ ಬರವನರಿಯದಿರ್ದಡೆ,
ಆ ಕೋಳಿ, ಕಾಗೆ, ಇರುವೆಗಿಂದಲು ಕರಕಷ್ಟ
ಕಾಣಾ' ಶ್ರೀಶೈಲ ಮಲ್ಲಿಕಾರ್ಜುನ ।

(ಇಂದಿನ ದೃಶ್ಯಗಳ ಚಿತ್ರಣ-ಹಾಗೂ ನವಸೃಷ್ಟಿ ನಿರ್ಮಾಣ)

ಜಾಗತಿಕ ಅನುಭಾವಿ ನೇತ್ರದಾನಿ ಡಾ|| ನೋದಿ
ಮಠಮಾನ್ಯಗಳನು ಕಂಡರೆ ನಮಗೆ ತುಂಬ ಭಯವಾಗುತಿದೆ,
ಎಂದು ಹೃದಯನೊಂದು ನುಡಿಯುತ್ತಾರೆ ನೋಡಾ।
ಇಂತು ಪೇಳಿದ ನೇತ್ರದಾನಿಯ ಮಾತು ಲೋಕಕ್ಕೆ
ಮಂತ್ರದಂತೆ ಧರ್ಮಸೂತ್ರ ಸತ್ಯವಾಣಿ ಕೇಳಾ।
ಮಹಾನುಭಾವಿ ಧರ್ಮದ್ರಷ್ಟಾರ ದೂರದೃಷ್ಟಿವೇಣ್
ಸಮಾಜ ಕಲ್ಯಾಣದಾ ದ್ಯೋತಕವಾಗಿ! ಉನ್ನತಿಗಾಗಿ!
ಮಠಮಂದಿರಗಳಂದು ಸ್ಥಾಪಿತವಾದುವು ನೋಡಯ್ಯಾ!
ಭಕ್ತಿಭಾವ ಬೆಳವಿಗಾಗಿ ಸಮಾಜ ಸಂಸ್ಕೃತಿ ಧರ್ಮರಕ್ಷಣೆಗಾಗಿ!
ಈ ಧರ್ಮಪೀಠಂಗಳಲ್ಲಿ ಧರ್ಮಗುರುಗಳನಿರಿಸಿ,
ಧರ್ಮಜ್ಞಾನ ಪ್ರಸಾದ ದಾಸೋಹ ನಿತ್ಯ ಸ್ವಾಮಿಗಳಿಂದ ಸಾಗಲಿ
ಎಂಬಾಶಯದಿ, ದತ್ತಿ-ದಾನ ಭೂಮಿಗಳ ನಿತ್ತು ಅಂದು
ಹಿರಿಯರು ಮಠಗಳಿಗೆ ಶಾಶ್ವತ ಉತ್ಪನ್ನ ಬರುವಂತೆ
ತುಂಬ ವ್ಯವಸ್ಥೆಮಾಡಿ ಹೋಗಿರುವ ನೋಡಾ!

ಅಂತೆಯೆ ಧರ್ಮಜಾಗೃತಿಯೆ ಮುಖ್ಯಧ್ಯೇಯವನೆ
ಇಂತು ಧರ್ಮಗುರುಗಳ ಪರಂಪರೆ ಇಂದಿಗೂ
ರೂಢವಾಗಿ ಸಾಗಿ ಬಂದಿಹುದು ನೋಡಾ!

ಆದಡೇ ನಿಂದು ಗುರುಧರ್ಮ ಪೀಠಂಗಳಲ್ಲಿ
ಧರ್ಮ ಸಂಚಯದ ಬದಲು ಕರ್ಮ ಸಂಚಯವೆ
ಕಡೆಮೊದಲಿಲ್ಲದಾಗಿಪ್ಪುದು ನೋಡಾ!
ಕಲ್ಯಾಣ ಶಿವಶರಣರಾ 'ಕಾಲಜ್ಞಾನ' ವಾಣಿ ಸತ್ಯವೆಂಬಂತೆ!
ಆ ಕಲಿಪುರುಷನಾ ಪ್ರಭಾವ ಗೊಂಡ ಸ್ವಾಮಿಗಳೆಲ್ಲ ಕೋರ್ಟು-
ಕಚೇರಿ ವ್ಯಾಜಂಗಳಲ್ಲಿ ಹೊಡೆದಾಡುತಿಪ್ಪ
ಇಂದಣ ಹುಯ್ಯಲು ಕೇಳಿರಣ್ಣಾ!

ಧರ್ಮಯುಗದಲ್ಲಿ ಶಿಷ್ಯನಿಗೆ ಗುರುವಿನಿಂದುಪದೇಶವಾದೊಡೆ!
ಕಲಿಯುಗದಲ್ಲಿ ಗುರುವಿಗೆ ಶಿಷ್ಯನಿಂದುಪದೇಶವಾಗಬೇಕು!
ಕಾಣಾ! ಶ್ರೀ ಶೈಲಮಲ್ಲಿಕಾರ್ಜುನ!"

'ಇಂದಿನಾ ಗುರು - ವಿರಕ್ತರ ಪ್ರಪಂಚ' ವ ನಾನೇನೆಂಬೆನಯ್ಯಾ !
ಧರ್ಮಮಂದಿರವೆನಿಪ್ಪ ಪುಣ್ಯಪ್ರದವಾದ
ಕೆಲವು ಜಗದ್ಗುರು ಮಠಂಗಳಲ್ಲಿ
ವೇಶ್ಯಾಂಗನೆಯರು ಜಗದ್ಗುರುಗಳೆನಿಸಿಕೊಂಡವರೊಡನೆ
ಕಾಮವಿಲಾಸ ನಡೆಸುತಿಪ್ಪುದು ನೋಡಾ !

ಈ ಕಾಮವಿಲಾಸ ನಾಟಕವ ಗುರು ನಡೆಯಿಸಿದಂತೆ,
ಶಿಷ್ಯನೂ ಹೆಚ್ಚು ಅಚ್ಚು ಮೆಚ್ಚಾಗಿ ಕಾಮಲೀಲೆಯ ನಡೆಸುವುದ ಕಂಡು
ಎನ್ನ ಮನ ಹೇಸಿಗೊಂಡಿತ್ತು.
ಕಾಣ ಬಾರದುದ ಕಂಡಂತಾಯಿತ್ತು ನೋಡಾ !

ಇಂತಹ ಜಗದ್ಭಂಡ ಜಗದ್ಗುರುಗಳಿಗೆ ಆ ಭೂದೇವಿ
ಅಯ್ಯೋ! ಏಕೆ ಆಶ್ರಯ ನೀಡಿಹಳೊ ನಾಕಾಣೆನಯ್ಯಾ ?
ಗುರು-ವಿರಕ್ತ ಮಠಂಗಳಲ್ಲಿ ತೊಟ್ಟಿಲ ತೂಗಬೇಕೇನಯ್ಯಾ
ಇದು ಏನು ವಿಧಿಲೀಲೆಯೊ ? ಪ್ರಳಯ ಸೂಚನೆಯೊ ?

ಎನಗೊಂದೂ ತೋಚದಂತಾಯಿತ್ತು ನೋಡಾ!
"ನಾಟ್ಯಭೂಷಣ" ಶ್ರೀ ಏಣಗಿ ಬಾಳಪ್ಪನವರ
"ಕಲಾವೈಭವ ನಾಟ್ಯಸಂಘ" ದಿಂದ ಪ್ರದರ್ಶಿಸಲ್ಪಡುವ
"ಗುರು ವಿರಕ್ತರ ಪ್ರಪಂಚ" ನಾಟಕ ನಿಜದೃಶ್ಯಗಳ ತೋರಿ
ಸಮಾಜ ಜಾಗೃತಿಗೊಳಿಸಿತು ಕಾಣಾ !
ಶ್ರೀಶೈಲಮಲ್ಲಿಕಾರ್ಜುನ !

**ನಾಡಿನ ತುಂಬಾ ನೂರು ಜಗದ್ಗುರು (228)**

ಆಶುಕವಿ ಭಾವಜೀವಿ ಅನುಭಾವಿ 'ಚೆನ್ನವೀರ ಕಣವಿ' :
ಕಾಡಿನ ತುಂಬಾ ಬಣ್ಣದ ಹೂಗಳು
ವಾಸನೆ ಕೆಲವೊಂದೆ
ನಾಡಿನ ತುಂಬಾ ನೂರು ಜಗದ್ಗುರು
ಇರುವುದು ಜಗವೊಂದೆ
ಎಂಬೀ ಭಾವಪೂರ್ಣ ಕವಿ ಹೃದಯವಾಣಿ ನಿಜಕೂ ದಿಟಕಂಡಯ್ಯಾ!

ಇಲ್ಲಿ ಕವಿಯ ಮಾರ್ಮಿಕ ನುಡಿಗಳಾದ ಸವಿ-ಭವಿ
ಸಂಗಮವಾಗಿ ನಿಂದಿದೆ ನೋಡಿರಯ್ಯಾ
ಸಲ್ಲಲಿತ ಬೋಧೆ ಮೇಣ್ ಮಾರ್ಗದರ್ಶನವಿಲ್ಲಿಪ್ಪುದು ನೋಡಿರಯ್ಯಾ!
ಮತ್ತೆಮಮ ಆತ್ಮಬಂಧುವೆನೆ ಸುಪ್ರಸಿದ್ಧ ಸಾಹಿತಿ
ಶ್ರೀ ಬಸವರಾಜ ಕಟ್ಟೀಮನಿ, ಕೃತಿರಾಜ
"ಜರತಾರಿ ಜಗದ್ಗುರು" ಕಂಡಯ್ಯಾ !
ಇದ್ದು ಮುಚ್ಚುಮರೆಯಿಲ್ಲದೆ ಬಿಚ್ಚಿತೋರಿಸುವ
ಉಚ್ಚತನು ಸ್ವಚ್ಛ ಹೃದಯುಡಾ ನಿಚ್ಚ ಕೃತಿ ಕಾಸಾರ ಕಂಡಯ್ಯಾ!
ಜಗದ ಕಣ್ಣಿಗೆ ಮಣ್ಣೆರಚುವಾ ಜಗದ್ಗುರುಗಳೆನಿಪ್ಪವರ ಜಗದ್ಭಂಡತನ
ಚಿತ್ರಣದ ಗಂಡುಕೃತಿ ಕಂಡಯ್ಯಾ !
ಇನ್ನು ಕುಶಾಗ್ರಮತಿ ಶ್ರೀ ಎನ್. ನರಸಿಂಹಯ್ಯ "ಸನ್ಯಾಸಿಗೆ ಹೆಣ್ಣು ಬೇಕೆ?"
ಎಂಬೀಕೃತಿಯಲ್ಲಿ ಇಂತು ಕಾಮವಿಲಾಸ ವೈಖರಿಯುನೆ
ಚಿತ್ರಿಪ ನೈಜ ಚಿತ್ರವನಲ್ಲಿ ಅಚ್ಚೊತ್ತಿಹರು ನೋಡಿರಯ್ಯಾ!
ಇನಿತಾದೊಡು ಮತ್ತೆ ಲೋಕರೂಢಿಯ ಮಾತು :
ಕೇಳಿ! "ಸಂಸಾರಿಯಾಗಬೇಕಿದ್ದರೆ ಲಗ್ನದ ಒಂದೆ ಹೆಣ್ಣು ಸಾಕು!"
ವಿರಕ್ತ ಗುರು ಸನ್ಯಾಸಿಯಾಗಬೇಕಿದ್ದರೆ ನೂರಾರು ಹೆಣ್ಣು ಬೇಕು
ಇನಿತಾದಡು ಇನ್ನೇನು? ಎನಿತೂ ನಾಚಿಕೆಯಿಲ್ಲದೆ ನರಕದೊಳು ಹೊರಳಾಡುತಿಪ್ಪ
ನರಕುರಿಗಳನೇನೆಂಬೆ ನೀನೆ ಹೇಳಾ!
ಶ್ರೀಶೈಲಮಲ್ಲಿಕಾರ್ಜುನ !

## ಭ್ರಷ್ಟಾಚಾರ (229)

ಎಲ್ಲಿ ನೋಡಿದಡಲ್ಲಿ ಭ್ರಷ್ಟಾಚಾರ ತುಂಬಿ ತುಳುಕಿತ್ತು ನೋಡಾ !
ಧಾರ್ಮಿಕ ಕ್ಷೇತ್ರದಲ್ಲಿ ಧರ್ಮವಳಿದು ಕರ್ಮಠತೆ ಸಾಗಿತ್ತು !
"ಸಾಹಿತ್ಯ ಕ್ಷೇತ್ರ"ದಲ್ಲಿ ಜಾತೀಯತೆಯ ದಬ್ಬಾಳಿಕೆ ನಡೆದು-
ಜೀವಂತ-ಜ್ವಲಂತ ಸಾಹಿತ್ಯಸತ್ಕಾವ್ಯಂಗಳಿಗೆ ಸ್ಥಾನವಿಲ್ಲವಾಯಿತ್ತು!
"ರಾಜಕೀಯರಂಗ"ದಲ್ಲಿ ಅಧಿಕಾರ ಲಾಲಸೆ ಹೆಚ್ಚಿ ಸ್ವಾರ್ಥಭಾವನೆ ಬೆಳೆದು
ಯಾವ ಅಡೆತಡೆಯಿಲ್ಲದೆ ಸಂಚಿನ ಲಂಚ ಸಾಮ್ರಾಜ್ಯವಾಯಿತ್ತು !
ಕೃಷಿರಂಗದಲಿ ರೈತ ಬಿತ್ತಿ ಹೆಚ್ಚು ಬೆಳೆದಂತೆ ಅವನಾಶೆ ಹೆಚ್ಚಿತ್ತು ನೋಡಾ!
ವ್ಯವಸಾಯ ಕ್ಷೇತ್ರದಲಿ ಪ್ರಾಮಾಣಿಕತೆಯುಳಿದು ಆಶೆ ಅತಿಯಾಗಿ ಹಣಕ್ಕಾಗಿ
ಸತತ ಕಳ್ಳಪೇಟೆ ಸಾಗಿತ್ತು ನೋಡಾ!

" ಶಿಕ್ಷಣ ಕ್ಷೇತ್ರದಲಿ ಪಾವಿತ್ರ್ಯತೆಯಳಿದು ಹೋಗಿ
ಜ್ಞಾನದ ಬದಲು, ಕೇವಲ ಅಕ್ಷರೀವಿದ್ಯೆ ಬೆಳೆದು ಫ್ಯಾಶನ್ನು ಹೆಚ್ಚಿತ್ತು ನೋಡಾ!
"ಪತ್ರಿಕಾ ಪ್ರಪಂಚ" ದಲಿ ಸುದ್ದಿ ಪತ್ರಗಳೆಲ್ಲ ದೇಶದ ಮುನ್ನಡೆಯ
ಗಮನಿಸದೆ, ಸತ್ಯಸಂಗತಿಗಳ ನಿರ್ದಾಕ್ಷಿಣ್ಯವಾಗಿ ಪ್ರಕಟಿಸದೆ,
ಸರಕಾರದ ಬೆನ್ನು ಚಪ್ಪರಿಸಿ, ಮತ್ತೊಂದು ಖ್ಯಾತ ಪತ್ರಿಕೆ ಸಹಿತ
ಜಾತೀಯತೆಯ ನೊಳಗಿರಿಸಿಕೊಂಡು, ಜಾತಿ ರಹಿತ ಪತ್ರಿಕೆಯ
ಮುಚ್ಚುಮರೆಯ ಸೋಗಿನಲ್ಲಿ ಹೆಚ್ಚಳವ ಕೊಚ್ಚಿಕೊಳ್ಳುತ್ತ ಪತ್ರ
ಪಾವಿತ್ರವನುಳಿದು ಸಾಗಿಹವು ನೋಡಿರಯ್ಯಾ !
ಇಂತು ತಮ್ಮ ಕುತಂತ್ರದಿಂದ ಹೊಟ್ಟೆಹೊರಕೊಳ್ಳುವಲ್ಲಿ ರಾಷ್ಟ್ರಪ್ರಗತಿಯುಳಿದು
ಪವಿತ್ರ ಪತ್ರಿಕಾಧರ್ಮವೆಂದು ಹೋಗಿ ದೇಶ ಹಾಳಾಯಿತ್ತು ನೋಡಾ
ಒಟ್ಟಿನಲ್ಲಿ ಇಂದು ಜನಕೋಟಿ ಹಣವೆ ಜೀವನದ ಸರ್ವಸ್ವವೆಂದ-
ರಿದು ಅದುವೆ ಪರಮ ಗುರಿಯೆಂದು ತಿಳಿದು,
ದೇವ-ಧರ್ಮ-ಭಕ್ತಿ-ಪ್ರೀತಿ ವಿಶ್ವಾಸ-ನೀತಿನೈರ್ಮಲ್ಯ
ಸುವಿಚಾರಂಗಳನೆಲ್ಲ ಬದಿಗೊತ್ತಿ, ಧನದ ಬೆಂಬತ್ತಿ
ಸಾಗಿರಲು, ಪ್ರಪಂಚದ ಪೇಟೆಯಲಿ ಇಂದು
ಮಾನವತೆಯು ಮಾರಾಟವಾಗುತ್ತಿದೆ ನೋಡಾ !
ಕಾಲಚಕ್ರದ ಸುಳಿಗೆ ಸಿಕ್ಕಿಬೀಳುವ ಭ್ರಷ್ಟಮಾನವನ
ಬಿಡುಗಡೆ ಇನ್ನೊಂದು ಹೇಳಾ ! ತಂದೆ ಶ್ರೀ ಶೈಲ ಮಲ್ಲಿಕಾರ್ಜುನ !

## 230 : ನವಸೃಷ್ಟಿ ನಿರ್ಮಾಣ

"ಈ ಭೂಮಿಯ ಮೇಲೆ ಧರ್ಮಗ್ಲಾನಿಯುಂಟಾಗಿ ಪಾಪಕರ್ಮ
ಹೆಚ್ಚಾಗಿರಲು, ಮಾನಧನಗಳೆಲ್ಲ ಮಸಣಸಮವಾಗಿರಲು
ಕಾಲಕಾಮರ ಹಾವಳಿ ಹೆಚ್ಚಿ' ಕೊಲೆ ಸುಲಿಗೆಗಳು ಹಬ್ಬಿ ಮೇಣ್
ರಕ್ತಚೆಲ್ಲಾಟ ಕ್ರೌರ್ಯ ನಡೆದಿರಲು,
ಜಗದಲ್ಲಿ ಮಕ್ಕಳಿಲ್ಲದ ಬಂಜೆಯೆ ಧನ್ಯಳೆನಿಸಿರಲು,
ಹೆತ್ತವರ ಬಾಳು ಗೋಳಟ್ಟು ಕುತ್ತಿನೊಳಿರಲು,

ಎಲ್ಲೆಲ್ಲೂ ದುಷ್ಟಶಕ್ತಿಗಳೆ ತಲೆಯೆತ್ತಿ ನಿಂದಿರಲು,
ಆಗ ಲೋಕಕ್ಕೆ ಕತ್ತಲೆ ಕವಿದು ದಾರಿಗಾಣದಾಗಿರಲು,
ಧಾರುಣಿಯು ನಡುಗುವುದು ! ಮೇರುವಲ್ಲಾಡುವುದು !
ಸಾಗರವು ಬತ್ತಿ ಬಯಲಹುದು ! ಶಿವಭಕ್ತಿ ಬಲಿಯದಿಹುದು !
ಭವಹರನ ಗುಡಿಗಳೊಳಗಾಗ ಸುರೆ-ಮಾಂಸ ಮಾರೀತು !
ಧರೆಗೆ ಚನ್ನಬಸವಣ್ಣ ಬಂದಾನು ! ಶಿವಧರ್ಮಧ್ವಜಹಾರೀತು !
ಶರಣರಿಗೆ ಹರಣ ಪಿರಿದಾಗಿ, ಹರದಾಳಿ ಎದ್ದುರಿದು ಬರುವಂದು
ನವಸೃಷ್ಟಿ ನಿರ್ವಾಣಗೊಂಡೀತು !
ಹೇಳಾ ! ಶ್ರೀ ಶೈಲಮಲ್ಲಿಕಾರ್ಜುನ ! "

## 231 ಭಕ್ತಿ ಭಾವಗಂಗೆ

**ಭಕ್ತಿಭಾವ ತರಂಗಗಳು** : "ಭಕ್ತಿಭಾವಭರಿತನಾಗಿ ಹಾಡುತಿಹ ಭಕ್ತನ
ಆರ್ಷಹೃದಯಗೀತನಾದ ತರಂಗಗಳು
ಆಕಾಶವನ್ನೆಲ್ಲ ವ್ಯಾಪಿಸಿ ನಾದಗೊಳಿಸುವುವು ನೋಡಾ !
ಅಂತೆಯೇ ಈ ಭಕ್ತಿಭಾವ ಗೀತೆಯ ನಾದ ತರಂಗಗಳು
ಆ ಭಗವಂತನ ಹೃದಯಕ್ಕೆ ನೇರವಾಗಿ
ಇಂಪಾಗಿ ಬಂದು ಅಪ್ಪಳಿಸುವುವು ನೋಡಾ!
ಇಂತಪ್ಪ ಸ್ವಾನುಭಾವಿ ಪರಮ ಭಕ್ತನು
ಮಹೋನ್ನತ ಭಕ್ತಿಯ ಬಲದಿಂದ
ಇಡಿಯ ಭಕ್ತಿಯನುಭಾವರವಿ
ಸಕಲ ವಿಶ್ವಪ್ರಪಂಚವನೆ ಬಿಡದೆ
ಬೆಳಕಿನತ್ತ ನಡೆಯಿಸುತಿಹನು ನೋಡಾ !
ಇದು ಕಾರಣ ಜಗದೊಳಗೆ ಶಿವನೊಲುಮೆಗೆ
ಭಕ್ತಿಗಿಂತ ಹಿರಿದಪ್ಪ ಶಕ್ತಿಯೇ ಇಲ್ಲ
ಕಾಣಾ ! ಶ್ರೀ ಶೈಲಮಲ್ಲಿಕಾರ್ಜುನ "

(ಮುಂದುವರಿಯುವುದು)

# ವಿಜ್ಞಾನ–ಆಧ್ಯಾತ್ಮ : ಒಂದು ಚಿಂತನೆ

–ಜ. ಹೊ. ನಾರಾಯಣಸ್ವಾಮಿ, ವಕೀಲರು ನಂ. 2064, ಅ ಮಾನವ, ಉತ್ತರ ಬಡಾವಣೆ,
ಹಾಸನ–573201

ಮನುಷ್ಯ ಏಕಕಾಲದಲ್ಲಿ ಎರಡು ಲೋಕಗಳಲ್ಲಿ ವಿಹರಿಸುತ್ತಾನೆ. ಒಂದು ಹೊರಲೋಕ; ಮತ್ತೊಂದು ಒಳಲೋಕ. ಹೊರಲೋಕದ ಅನ್ವೇಷಣೆಯನ್ನು 'ವಿಜ್ಞಾನ' ಎಂದು ಕರೆಯುತ್ತಾರೆ; ಒಳಲೋಕದ ಅನ್ವೇಷಣೆಯನ್ನು 'ಆಧ್ಯಾತ್ಮ' ಎಂದು ಕರೆಯುತ್ತಾರೆ. ವಿಜ್ಞಾನದ ಗುರಿ ವಸ್ತುವಿನ ಮೂಲ ಸ್ವರೂಪವನ್ನು ಕಂಡುಹಿಡಿಯುವುದು ಉದಾ : ಎಚ್.2ಒ. ಎರಡು ಭಾಗ ಜಲಜನಕ ಒಂದು ಭಾಗ ಆಮ್ಲಜನಕ ಸೇರಿದರೆ ನೀರು ಆಗುತ್ತದೆ. ಹೀಗೆ ಸಾಬೀತುಪಡಿಸುವುದು. ಆಧ್ಯಾತ್ಮದ ಗುರಿ ಅರಿಷಡ್ವರ್ಗಗಳಾಚೆ ಇರುವ ನೈಜ ಸ್ವರೂಪವನ್ನು ಕಂಡು ಕೊಳ್ಳುವುದು. ಕಾಮ, ಕ್ರೋಧ, ಲೋಭ. ಮದ. ಮೋದ ಮತ್ಸರಗಳನ್ನು ಕಮೀರಿದಾಗ ಕಾಣುವ ಒಳಬೆಳಕು. ಉದಾ: ಗೌತಮ ಬುದ್ಧನ ಸ್ಥಿತಿ. ಒಳಗೆ ಕಂಡುಕೊಂಡ ಬೆಳಕನ್ನು ಹೊರಗೂ ಕಾಣುವ ಸ್ಥಿತಿ.

ವಿಜ್ಞಾನ ಮತ್ತು ಆಧ್ಯಾತ್ಮಗಳ ಆಚೆಗೂ ಒಂದು ನಿಗೂಢ ಸ್ಥಿತಿ ಇದೆ. ಅದು ಅಭೇದ್ಯ. ಆಮ್ಲಜನಕ ಜಲಜನಕಗಳು ಇಂತಿಷ್ಟು ಪ್ರಮಾಣಗಳಲ್ಲಿ ಸೇರಿದರೆ ನೀರು ಆಗುತ್ತದೆ. ಅದು ಪ್ರಕೃತಿ ಸಹಜ ಕ್ರಿಯೆ. ಅದು ನೀರೆ ಆಗುತ್ತದೆ. ಬೇರೆ ಏನೂ ಆಗುವುದಿಲ್ಲ ಏಕೆ ? ಎನ್ನುವ ಪ್ರಶ್ನೆಗೆ ನಿಯಮ ಎನ್ನುವ ಉತ್ತರ ಕೊಡಬಹುದಾದರೂ ಅದು ಸೀಮಿತವಾಗುತ್ತದೆ. ವಾಸ್ತವವಾಗಿ ಅದಕ್ಕೆ ಸರಿಯಾದ ಉತ್ತರ ನಿರುತ್ತರವೇ ಆಗಿದೆ. ಏಕೆಂದರೆ ಮನುಷ್ಯನ ಹೊರಲೋಕ ಅನ್ವೇಷಣೆಯ ಲಕ್ಷ್ಮಣ ರೇಖೆ ಅದು. ಅದಕ್ಕೆ ಅನುಗುಣವಾಗಿ ಹೊಂದಿಕೊಂಡು ಬದುಕುವುದು. ಬದುಕಬೇಕಾದುದು ಅನಿವಾರ್ಯ. ಇದು ವಿಜ್ಞಾನದ ಮಿತಿ. ಆಧ್ಯಾತ್ಮದ ಅನ್ವೇಷಣೆಯ ಫಲವಾಗಿ ಮನುಷ್ಯನ ನೈಜ ಸ್ವರೂಪದ ಅರಿವಾದರೂ ಅದು ತಿಳಿಯುದಷ್ಟು ತಿಳಿಯುತ್ತ ಇಳಿದಷ್ಟು ಇಳಿಯುತ್ತ ಹಾರಿದಷ್ಟು ಅಗಲವಾಗುತ್ತಾ ಏರಿದಷ್ಟು ಎತ್ತರವಾಗುತ್ತ, ಆಳ, ಅಗಲ, ಎತ್ತರಗಳಿಗೆ ಉತ್ತರಿಸಲಾಗದಷ್ಟು ವಿಸ್ತರಿಸಿಕೊಳ್ಳುತ್ತಾ ಹೋಗುವಸ್ಥಿತಿ. ಇದು ಆಧ್ಯಾತ್ಮದ ಮಿತಿ.

ಸೃಷ್ಟಿಯ ಈ ಅನುಭಾವಕ್ಕೆ ಅಂತ್ಯವಿದೆಯೇ? ಈ ನಿಗೂಢವನ್ನೇ ದೇವರು ಎಂದು ಕರೆಯಲಾಗಿದೆಯೆ? ರೂಪಾತೀತವಾದ' ಗುಣಾತೀತವಾದ, ನಾಮಾತೀತವಾದ, ಅದು ಯಾವುದು ?

ಶಂಕರಾಚಾರ್ಯರ ' ಬ್ರಹ್ಮಸತ್ಯ–ಜಗನ್ಮಿಥ್ಯ ' ಎಂಬ ಸಿದ್ಧಾಂತ ಯಾವ ಅಥವಾ ಯಾವುದರ ಸ್ಥಿತಿಯನ್ನು ಕುರಿತದ್ದು ? ಅದ್ವೈತವನ್ನು ಒಪ್ಪುವುದಾದರೆ ಶಂಕರಾಚಾರ್ಯರು ಪ್ರತಿಪಾದಿಸಿದ ಈ ಅದ್ವೈತವೂ ಉಪನಿಷತ್ತುಗಳಲ್ಲಿ ವ್ಯಕ್ತವಾಗಿರುವ 'ಆತ್ಮವತ್ ಸರ್ವಭೂತೇಷು " ಎನ್ನುವ ಅದ್ವೈತವೂ ಒಂದೆಯೇ ? ಎಂಬ

ಪ್ರಶ್ನೆ ಪ್ರಮುಖ ಸ್ಥಾನ ಪಡೆಯುತ್ತದೆ; ತರ್ಕಕ್ಕೆ ಅನುವು ಮಾಡುತ್ತದೆ. ರಾಷ್ಟ್ರಕವಿ ಕುವೆಂಪು ಅವರು ತಮ್ಮ ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯದಲ್ಲಿ :

"ಬ್ರಹ್ಮಸತ್ತೆಯನಾ ಪರಬ್ರಹ್ಮ ಸತ್ತೆಯಿಂ
ಮಾತ್ರಮಯಿ ದರ್ಶಿಸುತಿದಂ ಮಿಥ್ಯೆಎಂಬುದೇಂ
ಪೂರ್ಣಸತ್ಯಮೆ? ಯೋಗ ವಿಜ್ಞಾನಮೊಪ್ಪದು ಕಣಾ;
ಪೂರ್ಣಮದು: ಪೂರ್ಣಮಿದು; ಪೂರ್ಣದಿಂ ಬಂದುದೀ
ಪೂರ್ಣಮಾ ಪೂರ್ಣದಿಂ ಪೂರ್ಣಮಂ ಕಳೆದೊಡಂ
ಪೂರ್ಣಮಯೆ ತಾನುಳಿವುದಾ ಪ್ರಜ್ಞಗದುವಿದುಂ
ಸರ್ವಮುಂ ಸತ್ಯದಾವಿಷ್ಕಾರ ವಿನ್ಯಾಸಗಳ್"

ಎಂದಾಗ ಈಗ ಯಾವುದು ಸತ್ಯ? ಯಾವುದು ಮಿಥ್ಯ? ಸತ್ಯದಿಂದ ಮಿತ್ಯದ ಉದಯದ ಸಾಧ್ಯವೇ ? ಸಾಧುವೇ ?

ವಿಜ್ಞಾನ ಆಧ್ಯಾತ್ಮಗಳು ಕಂಡುಕೊಳ್ಳುವ ಸ್ಥಿತಿಯ ಆಚೆಗೂ ವಿಸ್ತರಿಸಿರುವ ಅದರ ಪಾದ ತಳವಿರದ ಪಾತಾಳದಲ್ಲಿ; ಅದರ ಕೊನೆ ಇರದ ಆಕಾಶದಲ್ಲಿ.

ಇದು ಅರ್ಥಕ್ಕೆ ನಿಲುಕದ ಕೇವಲ ಅನುಭವ ವೇದ್ಯವಾದ 'ಅನುಭಾವ' ಎಂದು ಅದನ್ನು ಕಂಡುಕೊಳ್ಳಬಹುದೆ ?

ಆದ ಕಾರಣದಿಂದಲೆ ಎಂದು ಕಾಣುತ್ತದೆ ಕುವೆಂಪು ತಮ್ಮ ಶ್ರೀರಾಮಾಯಣ ದರ್ಶನಂ ಕಾವ್ಯದಲ್ಲಿ ಹೀಗೆ ಹಾಡಿದ್ದಾರೆ.

'.......... ..........................................ಶ್ರೀವಾಣಿಗಳ್
ಪಾಡಿದುವು ಮರ್ತ್ಯಮಲ್ಲದ ದಿವ್ಯ ಭಾಷೆಯೊಳ್
ಸ್ತೋತ್ರಂಗಳಂ, ಮಹಚ್ಛಂದೋ ವಿಧಾನದಿಂ
ಓಂ ನಮೋ ಸಚ್ಚಿದಾನಂದ ನಮೋ ನಮೋ;
ಓಂ ನಮೋ ಸರ್ವಸ್ವತಂತ್ರನೆ ನಮೋ ನಮೋ
ಆದಿಯಾದಿಯೆ ನಮೋ, ಅಂತ್ಯದಂತ್ಯವೆ ನಮೋ
ಆದ್ಯಂತದಾಚೆಗಿರುವಾತನೆ ನಮೋ ನಮೋ!
............... ............................. ........
ನಮೋ ನಮೋ, ನಮೋ, ನಮೋ, ನಮೋ, ನಮೋ

ಈ ಆದಿಗೆ ಆದಿಯೂ, ಅಂತ್ಯದ ಅಂತ್ಯವೂ, ಆದ್ಯಂತದ ಆಚೆಗೆ ಇರುವ ಅವನು ಅಥವಾ ಅದನ್ನು ಸಾಕ್ಷಾತ್ಕರಿಸಿ ಅದು. ಇದು ಎಂದು ಅಭಿವ್ಯಕ್ತಿಸಲು ವಿಜ್ಞಾನದಿಂದ ಸಾಧ್ಯವೆ? ಆಧ್ಯಾತ್ಮದಿಂದ ಸಾಧ್ಯವೆ ? ಇಲ್ಲಾ ಅದು ಅಭಿವ್ಯಕ್ತಿಸಲಾಗದ ಕೇವಲ ಅನುಭವೇದ್ಯ ಮಾತ್ರವೆ?

(ಸೌಜನ್ಯ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-583211)

# ಮೂಢ ನಂಬಿಕೆಗಳು

ಶ್ರೀಮತಿ ಶಾರದಾ ಗೋಪಾಲ್, ದುದ್ದ. ಮಂಡ್ಯ ಜಿಲ್ಲೆ.

ಈ ಜೀವನದಲ್ಲಿ ನಮಗೆ ಅರಿವಿಲ್ಲದಂತೆ ನಾವು ಎಷ್ಟೋ ಮೂಢ ನಂಬಿಕೆಗಳನ್ನು ಬೆಳೆಸಿಕೊಂಡಿರುತ್ತೇವೆ ಕೆಲವರು ಮೂಢನಂಬಿಕೆಗಳಿಂದ ದೂರವಿರಲು ಬಯಸುತ್ತಾರೆ. ಇದು ಖಂಡಿತವಾಗಿಯೂ ಒಳ್ಳೆಯ ಬೆಳವಣಿಗೆಯೆ. ಆದರೆ ನಾವು ಎಲ್ಲ ನಂಬಿಕೆಗಳನ್ನು ಸಹ ಮೂಢನಂಬಿಕೆಗಳೇ ಎಂದು ಹೇಳಲು ಸಾಧ್ಯವಿಲ್ಲ. ಕಾಗೆ ಅಡ್ಡಬರುವುದು, ಬೆಕ್ಕು ಅಡ್ಡಬಂದರೆ ಅಪಶಕುನವೆನ್ನುವುದು ಮೂಢ ನಂಬಿಕೆಯೇ ಇದು ಅರ್ಥವಿಲ್ಲದ್ದು ಆದರೆ ನಮ್ಮ ಸಂಸ್ಕೃತಿಯನ್ನು ಎತ್ತಿ ಹಿಡಿಯುವ ಕೆಲವು ನಂಬಿಕೆಗಳು ಪಾಲಿಸಬೇಕಾದಂತಹವು ಆಗಿರುತ್ತವೆ ಉದಾಹರಣೆಗೆ ದೇವರಲ್ಲಿ ನಂಬಿಕೆಯ ವಿಷಯವನ್ನೇ ತೆಗೆದುಕೊಳ್ಳೋಣ. ದೇವರನ್ನು ನಂಬುವವನು ಪೂಜಿಸುವವನು ಸುಶೀಲನೂ, ಸಹೃದಯಿಯೂ ದಾನ-ಧರ್ಮಗಳನ್ನು ಮಾಡುವವನೂ ಆದರೆ ಸರಿ, ಅದಲ್ಲದೆ ಎಲ್ಲಾ ಅನಾಚಾರಗಳನ್ನೂ ಮಾಡಿಕೊಂಡು ದೇವರಲ್ಲಿ ನಂಬಿಕೆ ಇಡುವವನ ನಂಬಿಕೆ ಅರ್ಥವಿಲ್ಲದ್ದು.

ನಾವು ಜೀವಿಸಿರುವುದೇ ಒಂದು ನಂಬಿಕೆಯಿಂದ, ನಾವು ಪ್ರತಿದಿನವೂ "ನಾಳೆ ನಾನು ಸಾಯುವುದಿಲ್ಲ" ಎಂಬ ನಂಬಿಕೆಯಿಂದಲೇ ಬದುಕುತ್ತೇವೆ. ಆಕಸ್ಮಾತ್ ನಾವು ನಾಳೆಯೇ ಸಾಯುತ್ತೇವೆ ಎಂಬುದು ತಿಳಿದರೆ ಯೋಚಿಸಿನೋಡಿ ನಮ್ಮ ಮನಃಸ್ಥಿತಿ ಎಷ್ಟು ಭಯಂಕರವಾಗ ಬಹುದು. ಆದ್ದರಿಂದ ನಂಬಿಕೆಯೇ ನಮ್ಮ ಜೀವನಾಧಾರ ಎನ್ನ ಬಹುದಲ್ಲವೇ.

ಕೆಲವರು ತಮ್ಮ ಕರ್ತವ್ಯಗಳನ್ನೂ ಸಹ ಮೂಢನಂಬಿಕೆಯ ಸಾಲಿಗೆ ಸೇರಿಸುತ್ತಾರೆ. ಉದಾಹರಣೆಗೆ ಗುರು-ಹಿರಿಯರನ್ನು ಗೌರವಿಸುವುದು, ಕಾಲಿಗೆ ನಮಸ್ಕರಿಸುವುದು, ಮನೆಯಲ್ಲಿ ವಯಸ್ಸಾದವರನ್ನು ಪ ಲಿಸುವುದು ಇದನ್ನು ಮೂಢನಂಬಿಕೆ ಎನ್ನುವರು ಮೂಢರಲ್ಲದೆ ಮತ್ತೇನು. ಪಾಶ್ಚಾತ್ಯರ ಅನುಕರಣೆ ಒಳ್ಳೆಯ ವಿಷಯದಲ್ಲಿ ಆಗಬೇಕು. ಪಾಶ್ಚಾತ್ಯರು ಕಷ್ಟ ಸಹಿಷ್ಣುಗಳು. ಈ ಅಂಶವನ್ನು ಅನುಸರಿಸುವುದನ್ನು ಬಿಟ್ಟು ಅವರ ವೈಭವ ಉಡುಗೆ ತೊಡಿಗೆಗಳನ್ನು ಮಾತ್ರ ಅನುಸರಿಸಿದರೆ ಅದು ತಪ್ಪಲ್ಲವೇ. ಇಲ್ಲಿ ಒಳ್ಳೆಯದು, ಕೆಟ್ಟದ್ದು ಎಂಬುದನ್ನು ಯೋಚಿಸುವುದು ಪ್ರತಿ-ಯೊಬ್ಬರ ಬುದ್ಧಿ ಶಕ್ತಿಗೆ, ತರ್ಕಶಕ್ತಿಗೆ ಸಂಬಂಧಿಸಿದುದಾಗಿರುತ್ತದೆ.

ಪರಮಾತ್ಮನಲ್ಲಿ ನಂಬಿಕೆ ಇಲ್ಲದವರು ಒಂದು ಪ್ರಶ್ನೆಗೆ ಉತ್ತರ ಕೊಡಲಿ, ಇಷ್ಟು ವ್ಯವಸ್ಥಿತವಾಗಿ ಅಹರ್ನಿಶಿ ಮುಂದುವರೆಯುತ್ತಿರುವ ಈ ವಿಶ್ವವನ್ನು ನಡೆಸುತ್ತಿರುವವರು ಯಾರು ? ಕಾಲಕಾಲಕ್ಕೆ ಸರಿಯಾಗಿ ಋತುಮಾನಗಳು, ಕಾಲ-ಕಾಲಕ್ಕೆ ಸರಿಯಾಗಿ ಮಳೆ-ಬೆಳೆಗಳು, ಹುಟ್ಟು-ಸಾವುಗಳು ಇನ್ನು ಮುಂತಾದ ಎಲ್ಲವನ್ನು ಹಿಡಿತದಲ್ಲಿಟ್ಟಿರಬಹುದಾದ ಶಕ್ತಿಯಾದರೂ ಯಾವುದು ? ಆ! ದೇವರಲ್ಲ ಇದು ಪ್ರಕೃತಿ ನಿಯಮ ಎನ್ನುವಿರಿ ಹೌದು? ನಾವು ದೇವರು ಎಂಬ ಹೆಸರಿನಲ್ಲಿ ಕರೆದರೆ ನೀವು ಆ ಶಕ್ತಿಯನ್ನೇ

ಪ್ರಕೃತಿ ಎಂದು ಕರೆಯುತ್ತಿರುವಿರಿ ಅಷ್ಟೆ. ಈ ಜಗತ್ತಿನ ಎಷ್ಟೋ ವೈಚಿತ್ರ್ಯಗಳನ್ನು ಅರ್ಥಮಾಡಿಕೊಳ್ಳಲೂ ಸಹ ಶಕ್ತನಾಗಿಲ್ಲ ಈ ಮಾನವ.

ಇನ್ನೊಂದು ಅತಿ ಕೆಟ್ಟ ಮೂಢನಂಬಿಕೆ ಎಂದರೆ, ಇದು ನಮ್ಮ ಧರ್ಮ, ಅದು ನಿಮ್ಮ ಧರ್ಮ ಎನ್ನುವ ಹಲವಾರು ಧರ್ಮಗಳು ಮತ್ತು ಹಲವಾರು ದೇವರುಗಳು, 'ಎ' ಎಂಬ ವ್ಯಕ್ತಿಯನ್ನು ಮಕ್ಕಳು ಅಪ್ಪ ಎನ್ನುತ್ತಾರೆ. ತಂದೆ ತಾಯಿಯವರು ಮಗನೇ ಎಂದು ಕರೆಯುತ್ತಾರೆ ಅದೇ ವ್ಯಕ್ತಿಯನ್ನು ಸೋದರರು ಅಣ್ಣ-ತಮ್ಮ ಎಂದು ಭಾವಿಸುತ್ತಾರೆ. ಹೀಗೆ ಈ ಎಲ್ಲಾ ಸಂಬಂಧಗಳೂ ಸಹ ಒಬ್ಬನೇ ವ್ಯಕ್ತಿಯನ್ನು ಕುರಿತಾದ ಸಂಬಂಧಗಳು ಅಲ್ಲವೇ. ಹಾಗೆಯೇ ಒಬ್ಬನೇ ಪರಮಾತ್ಮನನ್ನು ಹಿಂದುಗಳು ಶಿವ-ಕೃಷ್ಣ ಎಂತಲೂ, ಮುಸಲ್ಮಾನರು ಅಲ್ಲಾ ಎಂದೂ, ಕ್ರಿಶ್ಚಿಯನ್ನರು ಕ್ರೈಸ್ತನೆಂದೂ, ಕರೆಯುತ್ತೇವೆ. ನಾವೆಲ್ಲಾ ಒಬ್ಬನೇ ಪರಮಾತ್ಮನ ಆರಾಧಕರು ಅಷ್ಟೇ ಇದು ಮಾತ್ರ ಸತ್ಯ ಇದು ಪ್ರತಿಯೊಬ್ಬರೂ ಅರಿಯಲೇಬೇಕಾದ ವಿಷಯ.

ಆದ್ದರಿಂದ ಸಮಾಜದ ಒಳಿತಿಗೆ ಮಾನವನ ಅಭಿವೃದ್ಧಿಗೆ ಪೂರಕವಾಗುವಂತಹ ನಂಬಿಕೆಗಳನ್ನು ಮಾತ್ರ ಪಾಲಿಸೋಣ. ಮತ್ತು ಸಮಾಜಕ್ಕೆ ಮಾರಕವಾದಂತಹ ಮೂಢನಂಬಿಕೆಗಳನ್ನು ಖಂಡಿತ ಕೈ ಬಿಡೋಣ ಅಲ್ಲವೇ !

---

# ಮಹಾದೇವಿಯಕ್ಕ

ಶ್ರೀ ಸಂ.ಶಿ. ಭೂಸನೂರಮಠ, ಎಂ. ಎ., ಧಾರವಾಡ

"ಮೊರೆವ ನಾದವ ಕೇಳಿ ಉರಿವ ಜ್ಯೋತಿಯ ನೋಡಿ
ಸುರಿವ ಅಮೃತವನ್ನು ದಣಿಯುಂಡ ಕಾರಣದಿ

ತೊರೆದಿಹೆನು ಜನನ-ಮರಣಗಳ"
"ಒಂಬತ್ತು ಚೌಕದಾ । ಉಂಬುಡುವ ಮನೆಯನ್ನು
ನಂಬದೆಯೆ ಕಡೆಗೆ ತೊಲಗಿಸುತ ಮುಂದಣಾ
ಸಂಭ್ರಮದ ಮನೆಗೆ ನಡೆದಿಹೆನು"

"ಎನ್ನ ಕಾಯವೆ ಗುರುವು । ಎನ್ನ ಪ್ರಾಣವೇ ಲಿಂಗ
ಎನ್ನಂತರಾತ್ಮವೇ ಚರಲಿಂಗವಾಗಿರಲು
ಇನ್ನುಂಟೆ ಎನಗೆ ತನು-ಮನವು"

ಮಹಾದೇವಿಯಕ್ಕನ ಯೋಗಾಂಗ ತ್ರಿವಿಧಿಯಿಂದ ಈ ಪದ್ಯಗಳನ್ನು ತೆಗೆದು ಕೊಂಡಿದೆ. ಇಲ್ಲಿ ಕಠಿಣ ಶಬ್ದ ಇಲ್ಲ, ಅರ್ಥ-ಭಾವ ಸರಳ. ಇದನ್ನು ಓದಿದರೆ ಓದುಗನ ಭಾವ ಪಾವನವಾಗುತ್ತದೆ. ಹಾಡಿದರೆ ಪದ್ಯಗಳಲ್ಲಿ ಹರಿವ ನಿರ್ಮಲಾನಂದ ದಿಂದ ಹೃದಯ ಪರಿಶುದ್ಧವಾಗುತ್ತದೆ. ಪದ್ಯಗಳಲ್ಲಿ ಅಸ್ಪಷ್ಟವಾಗಿ- ಅವಿಜ್ಞಾತ ವಾಗಿ ಇರುವ ಮಾಧುರ್ಯ ಸೌಂದರ್ಯಗಳಲ್ಲಿ ಮಹಾದೇವಿಯಕ್ಕನ ಮನೋಜ್ಞ ಮೂರ್ತಿ ರೂಪುಗೊಂಡು ನಿಲ್ಲುತ್ತದೆ. ಅಕ್ಕನ ವ್ಯಕ್ತಿಯನ್ನು ಮುಕ್ಕಳಿಸುತ್ತಿರುವ ಈ ತ್ರಿಪದಿಗಳನ್ನು ಮನವಾರೆ ಮೆಚ್ಚುತ್ತೇವೆ; ಅತ್ಯುತ್ತಮ ಭಾವಗೀತೆಗಳೆಂದು ಕರೆಯುತ್ತೇವೆ. ಮಹಾದೇವಿಯಕ್ಕನ ವಚನಗಳನ್ನು, ಆಕೆಯ ಯೋಗಾಂಗತ್ರಿವಿಧಿ ಯನ್ನು ಪೂರ್ಣ ಓದಿದರೆ ಅಕ್ಕನ ವ್ಯಕ್ತಿತ್ವದ ಕಲ್ಪನೆ ವಿಸ್ತಾರವಾಗುತ್ತ, ಉಜ್ವಲ ವಾಗುತ್ತ ನಡೆಯುಬಹುದು. ಅಸಾಮಾನ್ಯವಾದ, ಅಪೂರ್ವವಾದ, ದಿವ್ಯ-ಭವ್ಯವಾದ ಇಂಥ ವ್ಯಕ್ತಿಯನ್ನು—ಕನ್ನಡ ನಾಡಿನಲ್ಲಿ ಹುಟ್ಟಿ, ಕನ್ನಡದಲ್ಲಿ ಹಾಡಿ ಮಾನವಕುಲದ ಮುಂಡೆಗೆ ಹೂವನ್ನು ತಂದ ಮಹಾದೇವಿಯಕ್ಕನನ್ನು ಕೇವಲ ಕನ್ನಡ ನಾಡಷ್ಟೇ ತಮ್ಮವಳೆಂದು ದಕ್ಕಿಸಿಕೊಳ್ಳಲಾರದು. ನೆಲವನ್ನು, ಗಾಳಿಯನ್ನು, ಆಕಾಶ-ಪ್ರಕಾಶ ವನ್ನು ತನ್ನದೇ ಸೊತ್ತೆಂದು ಒಂದು ನಾಡು, ರಾಷ್ಟ್ರ, ಭೂಖಂಡ ತನ್ನಲ್ಲಿ ಅಡಗಿಸಿ ಇಟ್ಟುಕೊಳ್ಳಬಲ್ಲುದೆ? ಬುದ್ಧನನ್ನು ಭರತಖಂಡ ಹಿಡಿಸಲಿಲ್ಲ, ಕ್ರೈಸ್ತನನ್ನು ಏಸಿಯಾ ಯುರೋಪ ಒಳಕೊಳ್ಳಲಿಲ್ಲ. ಕವಿ, ರಾಜಕಾರಣಿ, ವಿಜ್ಞಾನಿ, ಭಕ್ತ, ಅನುಭಾವಿ

ಇವರಲ್ಲಿ ಯಾರಿಗೇ ಆಗಲಿ 'ಮಹಾ' ಎಂಬ ವಿಶೇಷಣ ನಾವು ಹಚ್ಚುವುದಾದರೆ ಅಂದರೆ ಮಹಾಕವಿ, ಮಹಾ ವಿಜ್ಞಾನಿ, ಮಹಾನುಭಾವಿ ಎಂದು ಕರೆದು, ಅವರನ್ನು ಒಂದು ನಾಡು-ಖಂಡಗಳಲ್ಲಿ, ಒಂದು ಕಾಲ-ಜನತೆಯ ಚೌಕಟ್ಟಿನಲ್ಲಿ ಇರಿಸುವುದು ಅಂಥತನದ ಅಜ್ಞಾನವೇ. ಎಲ್ಲಿಯೇ ಇರಲಿ, ಯಾವ ಕಾಲದಲ್ಲಿಯೇ ಇರಲಿ, ಯಾವ ಧರ್ಮ ಭಾಷೆ ಸಂಸ್ಕೃತಿ ಸಂಪ್ರದಾಯದಲ್ಲಿಯೆ ಹುಟ್ಟಲಿ-ಮಹತ್ತಿಗೆ 'ಮಾನ' (ಅಳತೆ) ಇಲ್ಲ; ಸೀಮೆ, ಇಲ್ಲ, ಸಂಬಂಧ ಇಲ್ಲ. ಅವೆಲ್ಲ ಮಹತ್ತಿಗೆ ನಿಮಿತ್ತ ಮಾತ್ರ.

ಮಹಾದೇವಿಯಕ್ಕನ ವ್ಯಕ್ತಿತ್ವದ ಮೇಲೆ ಆವರಿಸಿರುವ ಕಾಲ ದೇಶ ಭಾಷೆ, ಶಿಷ್ಟ ಸಂಸ್ಕೃತಿ ಸಂಪ್ರದಾಯಗಳನ್ನು ತೆಗೆದಿಟ್ಟು ಆಕೆಯ ವ್ಯಕ್ತಿತ್ವವನ್ನು ನೋಡಿದರೆ ಮಹಾದೇವಿಯಕ್ಕ-ಮಹಾ-ದೇವಿ ಮತ್ತು ಅಕ್ಕ. ಅಂತರಂಗದಲ್ಲಿ ಮಹಾಘನ ಪರಂಜ್ಯೋತಿಯಾಗಿ ಬೆಳಗಿ, ಬಹಿರಂಗದ ಲೋಕಕ್ಕೆಲ್ಲ ಅಕ್ಕನಾಗಿದ್ದ ಮಹಾದೇವಿಯಕ್ಕ-ಅದೊಂದು ದಿವ್ಯವ್ಯಕ್ತಿ, ದಿವ್ಯಶಕ್ತಿ; ಮಾನವ್ಯವೆಂಬ ಕತ್ತಲೆಯ ಹೆಗ್ಗಡಲನ್ನು ದಾಂಟಿದ ಬೆಳಗಿನ ಅಪಾರ ವಾರಾಶಿ; ಜನನ-ಮರಣಗಳನ್ನು ಮೀರಿ ನಿಂದ ನಿತ್ಯಸತ್ಯ; ಜೀವಸಂಸಾರದ ಸುಖ-ದುಃಖಗಳನ್ನು ಕೆಡೆನೂಕಿದ ಪರಿಪೂರ್ಣ ಆನಂದ.

'ತನುವಿದನುಳಿದು ಇಂದ್ರಜಾಲವೊಂದುಂಟೆ?' ಎಂದು ಹೇಳುತ್ತಾರೆ ನಿಜಗುಣ ಶಿವಯೋಗಿಗಳು. ರಾಕೆಟ್, ಸ್ಪುಟ್ನಿಕ್, ರೇಡಿಯೋ; ಟೆಲಿವ್ಹಿಜನ್ ಮುಂತಾದ ವಿಜ್ಞಾನಿಯ ಇಂದ್ರಜಾಲವನ್ನು ನೋಡಿ ನಿಬ್ಬೆರಗಾಗುತ್ತೇವೆ ನಾವು. ಆದರೆ ಆ ಇಂದ್ರಜಾಲವನ್ನು ನಿರ್ಮಿಸುತ್ತಿರುವ ಮಾನವನ ತನು-ಮನ-ಬುದ್ಧಿ ಎಂಥ ಮಹೇಂದ್ರ ಜಾಲ! ಈ ಜಾಲವನ್ನು ಪ್ರತಿನಿತ್ಯ ನೋಡುತ್ತೇವೆ, ಅನುಭವಿಸುತ್ತೇವೆ. ಆದರೆ ಮಾನವನೆಂಬ ಮಹೇಂದ್ರ ಜಾಲದ ಮರೆಯಲ್ಲಿ

ನೆಲದ ಮರೆಯ ನಿಧಾನದಂತೆ,
ಫಲದ ಮರೆಯ ರುಚಿಯಂತೆ,
ಶಿಲೆಯ ಮರೆಯ ಹೇಮದಂತೆ
ತಿಲದ ಮರದ ತೈಲದಂತೆ
ಭಾವದ ಮರೆಯ ಬ್ರಹ್ಮವಾಗಿ ಇಪ್ಪ
ಚೆನ್ನಮಲ್ಲಿಕಾರ್ಜುನನ ನಿಲವನಾರು ಅರಿಯಬಾರದು.

ದೇಹ ಪ್ರಾಣ ಕರಣೇಂದ್ರಿಯಗಳಲ್ಲಿ ಮುಳುಗಿ "ಭಾವದ ಮರೆಯ ಬ್ರಹ್ಮ"ವನ್ನು

ತನ್ನ ನಿಜವಾದ ಸಚ್ಚಿದಾನಂದ ನಿತ್ಯ ಪರಿಪೂರ್ಣವನ್ನು, ತಾನು ತಾನಾದ ತನ್ನನ್ನು ಸಾಧಿಸುವುದು ಅಸಾಧ್ಯಸಾಧನ. ಕವಿ, ವಿಜ್ಞಾನಿ, ತತ್ತ್ವಜ್ಞಾನಿ, ರಾಜಕಾರಣಿ ಮುಂತಾದವರು ಏನನ್ನಾದರೂ ಸಾಧಿಸಬಹುದು. ಆದರೆ ತನ್ನ ನಿಜದಿರವಾದ "ಮುಳ್ಳು ಗುತ್ತುವರೆತೆ ರಹಿಯಿಲ್ಲದ ಪರಿಪೂರ್ಣ ಮಹಾಘನ"ವನ್ನು ತನ್ನಲ್ಲಿ ಭೇದಿಸಿ ಸಾಧಿಸುವುದು ಅತಿ ಕಠಿಣ. ದೇಹದ ಅನಿತ್ಯ ಸಂಸಾರದ ನಿಸ್ಸಾರ "ಭಂಗವೇ ಬಸುರಾದ ವಿಷಯ ಸುಖಂಗಳಿಗೆ ಹೇಸಿ" ಅವನ್ನೆಲ್ಲ ಕಳೆದು, ತೆಗೆದೊಗೆದು ಅನಿತ್ಯದ ಗರ್ಭದಲ್ಲಿ ನಿತ್ಯವನ್ನು ಸಾಧಿಸಿ, ನಿಸ್ಸಾರದ ನಿಜದಿರವಾದ ಪರಮಾರಂದ ರಸವನ್ನು ಉಂಡು, ಬೆಳಗಿನಲ್ಲಿ ಬಾಳಿ ಬದುಕಿ ಮರ್ತ್ಯಕ್ಕೆ "ಅಮರ್ತ್ಯ"ದ ಸಂದೇಶವನ್ನು ಎಂದೆಂದಿಗೂ ನೀಡುತ್ತಿರುವ ಮಹೋಜ್ವಲ ವ್ಯಕ್ತಿ ಮಹಾದೇವಿ. ಇಂಥ ದೇವಿಯ ಶ್ರೀಪಾದಕ್ಕೆ ನಮೋ ನಮೋ ಎಂದರು ಚೆನ್ನಬಸಣ್ಣನವರು :

ತನುವಿನೊಳಗೆ ಇದ್ದು ತನುವ ಗೆದ್ದಳು.
ಮನದೊಳಗೆ ಇದ್ದು ಮನವ ಗೆದ್ದಳು.
ವಿಷಯದೊಳಗೆ ಇದ್ದು ವಿಷಯಂಗಳ ಗೆದ್ದಳು.
ಅಂಗ ಸಂಗವ ತೊರೆದು ಭವವ ಗೆದ್ದಳು,
ಕೂಡಲ ಚೆನ್ನಸಂಗಯ್ಯನ ಹೃದಯ ಕಮಲವ
ಬಗಿದು ಹೊಕ್ಕು, ನಿಜಪದವನೆಯ್ದಿದ
ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು !

ಮಹಾದೇವಿಯಕ್ಕ ಹುಟ್ಟಿದುದು ಹಳೆಯ ಮೈಸೂರು ಪ್ರಾಂತದಲ್ಲಿದ್ದ ಉಡುತಡಿ ಎಂಬ ಗ್ರಾಮದಲ್ಲಿ; ನಿರ್ಮಳ ಸುಮತಿಯೆಂಬ ಶಿವಭಕ್ತ ದಂಪತಿಗಳ ಗರ್ಭದಲ್ಲಿ. ಶುಕ್ತಿಕೆಯಲ್ಲಿ ಮುತ್ತು ಹುಟ್ಟುವಂತೆ ಹುಟ್ಟಿದ ಮಗುವಿಗೆ ಮಹಾದೇವಿ ಎಂದು ತಂದೆತಾಯಿಗಳು ಹೆಸರಿಡಲು ಕಾರಣ-ಮಗುವಿನ ಸರ್ವಾಂಗದಲ್ಲಿ ತುಂಬಿ ತುಳುಕುತಿದ್ದ ದಿವ್ಯಕಳೆ.

ಶಿವಿ ತನುವಿನಲತಿ ಮಹತ್ತರ
ದೇವತಾ ಕಳೆಯಿರಲು ಮಿಗೆ ಮಹ
ದೇವಿಯೆಂಬೀ ಹೆಸರನಿಟ್ಟರು ನಿಜ ಕುಮಾರಿತಿಗೆ !

ಭಕ್ತಿಯ ಬಳ್ಳಿಯಂತೆ ಬೆಳೆದಳು ಮಹಾದೇವಿ. ಪುಟವಿಕ್ಕಿದ ಮಿಸುನಿಯಂತೆ ಕಾಯ ಕಾಂತಿಯೇರುತ್ತ ಜವ್ವನವನಪ್ಪಲ, ಆಕೆಯ ಸೌಂದರ್ಯ ದಿವ್ಯತೇಜವನ್ನು ಮಳೆಗರೆಯಿತು. ಉಡುತಡಿಯ ನಾಡಿನ ದೊರೆ ಕೌಶಿಕ ವೈಹಾಳಿಯಿಂದ ಅರಮನೆಗೆ ತಿರುಗಿ ಬರುವಾಗ ಮಹಾದೇವಿಯನ್ನು ಕಂಡು "ಕಾಮಾತುರತೆ ಮಿಗೆ" ಕಂಗೆಟ್ಟು

ಕಳವಳಿಸಿದ !" ಕೌಶಿಕ ದೊರೆ ಶಿವಭಕ್ತನಲ್ಲ; ಮಹಾದೇವಿಯಕ್ಕ ಶಿವಭಕ್ತೆ. ಸಂಬಂಧ ಅಳವಡುವುದೆಂತು ? ಶಿವದೀಕ್ಷೆಯನೊಲ್ಲದ ದೊರೆಯನ್ನು ನಿರಾಕರಿಸಿ, ದಿಗಂಬರವೆ ದಿವ್ಯಾಂಬರವಾಗಿ, ತಂದೆ-ತಾಯಿ, ಬಂಧು-ಬಳಗವನ್ನೆಲ್ಲ ಅತಿಗಳೆದು ನಿರ್ಭಯದಿಂದ ಕಲ್ಯಾಣಕ್ಕೆ ನಡೆದು ಬಂದಳು. ಮಹಾದೇವಿಯಕ್ಕನ ಹೃದಯದ ಹಸಿವು ಚೆನ್ನ ಮಲ್ಲಿಕಾರ್ಜುನಲ್ಲದೆ ಹಿಂಗದು. ಸಾವಿಲ್ಲದ, ಕೇಡಿಲ್ಲದ, ರೂಪಿಲ್ಲದ ಚೆಲುವಂಗೆ.... ಚೆಲುವ ಮಲ್ಲಿಕಾರ್ಜುನನಿಗೆ ಒಲಿದ ಮನ, ಸಾವ ಕೆಡುವ ಗಂಡರಿಗೆ ಒಲಿವುದೆಂತು ?

ಗಿರಿಯಲ್ಲದೆ ಹುಲ್ಲು ಮೊರಡಿಯಲ್ಲಾಡುವುದೇ ನವಿಲು ?
ಕೊಳನಲ್ಲದೆ ಕಿರುವಳ್ಳಕ್ಕೆಳಸುವುದೇ ಹಂಸೆ ?
ಪರಿಮಳವಿಲ್ಲದ ಪುಷ್ಪಕ್ಕೆಳಸುವುದೇ ಭ್ರಮರ ?
ಎನ್ನ ದೇವ ಚನ್ನಮಲ್ಲಿಕಾರ್ಜುನನಲ್ಲದೆ,
ಅನ್ಯಕ್ಕೆಳಸುವುದೇ ಎನ್ನ ಮನ ? ಕೇಳಿರೆ ಕೆಳದಿಯರಿರಾ.

ಚೆನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯಲ್ಲಿ, ೧೨ ನೆಯ ಶತಮಾನದ ಶರಣರಿಂದ ಅಭಿನವ ಕೈಲಾಸವೆನಿಸಿದ ಕಲ್ಯಾಣಕ್ಕೆ ಮಹಾದೇವಿಯಕ್ಕ ಹೃದಯದ ಹಂಬಲವನ್ನು ಹಾಡುತ್ತ ಬಂದಳು. ಶರಣರ ಮಹಾನುಭಾವಗೋಷ್ಠಿ ನಡೆವ ಅನುಭಾವ ಮಂಟಪ ದಲ್ಲಿ ಅಕ್ಕನಿಗೆ ಪ್ರವೇಶ ದೊರೆತುದು ಆಕೆಯ ಅನುಭ ಬಲದಿಂದ. ಶೂನ್ಯ ಸಿಂಹಾಸನದಲ್ಲಿ ಮಂಡಿಸಿದ "ಮಾಯಾ ಕೋಲಾಹಳ" ಅಲ್ಲಮ ಪ್ರಭು ದೇವರೊಡನೆ ನಡೆದ ಅಕ್ಕನ ಅನುಭಾವಪ್ರಸಂಗವನ್ನು ಕೇಳಿ :

ಪ್ರಭು : ಉಡುಮದದ ಯೌವನವನೊಳಕೊಂಡು ಸತಿ, ನೀನು ಇತ್ತಲೇಕೆ
ಬಂದೆಯವ್ವಾ ? ಸತಿಯೆಂದರೆ ಮುನಿವರು ನಮ್ಮ ಶರಣರು.
ನಿನ್ನ ಪತಿಯ ಕುರುಹ ಹೇಳಿದರೆ ಬಂದು ಕುಳ್ಳಿರು, ಅಲ್ಲದಿರೆ
ತೊಲಗು ತಾಯೆ.

ಮಹಾ : ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ ...
ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೆ
ನಾನೊಲಿದೆನಯ್ಯಾ. ಚೆನ್ನಮಲ್ಲಿಕಾರ್ಜುನ ಗಂಡನೆನಗೆ.
ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯಾ.

ಪ್ರಭು : ರೂಪಿಂಗೆ ಕೇಡುಂಟು, ನಿರೂಪಿಂಗೆ ಕೇಡಿಲ್ಲ.
ರೂಪು ನಿರೂಪನೊಡಗೂಡುವ ಪರಿ ಎಂತು ಹೇಳಾ ?
ದೇಹ ಇಂದ್ರಿಯವೆಂಬ ಜಾತಿಸೂತಕವಿರಲು,
ಗುಹೇಶ್ವರ ಲಿಂಗವ ಮುಟ್ಟಬಾರದು ಕೇಳವ್ವಾ.

ಮಹಾ : ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲರೆ
ಹಾವಿನ ಸಂಗವೆ ಲೇಸು ಕಂಡಯ್ಯಾ ಕಾಯದ ಸಂಗವ ವಿವರಿಸಬಲ್ಲರೆ,
ಕಾಯದ ಸಂಗವೆ ಕಂಡಯ್ಯಾ.
ಚೆನ್ನಮಲ್ಲಿಕಾರ್ಜುನಯ್ಯಾ, ನೀನೊಲಿದವರ ಕಾಯಗೊಂಡಿದ್ದರೆನಬೇಡ.

ಕಾಯವಿದ್ದು ಕಾಯಗುಣನಷ್ಟವಾದ, ಪ್ರಾಣವಿದ್ದು ಪ್ರಾಣಧರ್ಮ ನಾಸ್ತಿಯಾದ, ಮನವಿದ್ದು ಮನವಳಿದ, ಭಾವವಿದ್ದು ನಿರ್ಭಾವವಾದ ಅಂದರೆ ಇದ್ದು ಇಲ್ಲದ ಮಹಾದೇವಿಯಕ್ಕನ ಅನುಭಾವ ಶರಣರೊಡನೆ ನಡೆದ ಸಂವಾದದಲ್ಲಿ ಹಂತ ಹಂತವಾಗಿ ಹೊರಹೊಮ್ಮಿ ಲಿಂಗಾಂಗ ಸಾಮರಸ್ಯದ ಪರಮ ವೈಭವವನ್ನು ಪ್ರಜ್ವಲಿಸಿ ತೋರಿತು. ಅಂಗ-ಮನ-ಭಾವ-ಜ್ಞಾನ-ಕ್ರಿಯೆಯೆಲ್ಲ ಲಿಂಗೈಕ್ಯವಾಗಿ ನಿಂದ ನಿಲುವನ್ನು ಶರಣರಿದಿರು ಲೆಕ್ಕ ಒಪ್ಪಿಸಿದಂತೆ ಒಪ್ಪಿಸಿ, "ನಾನೆಂಬುದ ನಿಲಿಸಿ, ನೀನೆಂಬುದ ಕೆಡಿಸಿ, ಉಭಯ ಲಿಂಗೈಕ್ಯವ ಮಾಡಿದೆ. ಚೆನ್ನಮಲ್ಲಿಕಾರ್ಜುನನೊಳಗೆ ನಾನಳಿದೆನಾಗಿ, ಲಿಂಗವೆಂಬ ಘನವು ಎನ್ನಲ್ಲಿ ಅಳಿಯಿತ್ತು ಕಾಣಾ ಸಂಗನ ಬಸವಣ್ಣಾ" ಎಂದು ತನ್ನ ನಿಜಾನುಭಾವದ ನಿಲುವನ್ನು ನಿರಹಂಭಾವದಿಂದ ಬಿನ್ನವಿಸಿದಳು.

ಅಕ್ಕನ ವ್ಯಕ್ತಿತ್ವವನ್ನು, ಆಕೆಯ "ಚೆನ್ನಮಲ್ಲಿಕಾರ್ಜುನತನ"ದ ನಿಲುವನ್ನು ಕಂಡು ಬಸವಣ್ಣ, ಚೆನ್ನಬಸವಣ್ಣ, ಮಡಿವಾಳಯ್ಯ, ಸಿದ್ಧರಾಮಯ್ಯ, ಅನುಭವ ಮಂಟಪದ ಅಸಂಖ್ಯಾತರೆಲ್ಲ ಮೆಚ್ಚಿ 'ಅಹುದು' ಎಂದರು. ಚೆನ್ನಬಸವಣ್ಣ ಉಕ್ಕಿದ.

ಅಜಕಲ್ಪಕೋಟಿ ವರುಷದವರೆಲ್ಲ ಹಿರಿಯರೆ ?
ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೆ
ಕೂಡಲ ಚೆನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ
ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು

ಮಹಾದೇವಿಯಕ್ಕ ಶರಣರನ್ನು ಬೀಳ್ಕೊಂಡು ಶ್ರೀಶೈಲಕ್ಕೆ ಬಂದು ಕದಳಿಯ ಬಾಗಿಲಲ್ಲಿ ನಿಂದು

ಕದಳಿಯೆಂಬುದು ತನು, ಕದಳಿಯೆಂಬುದು ಮನ,
ಕದಳಿಯೆಂಬುದು ವಿಷಯಂಗಳು, ಕದಳಿಯೆಂಬುದು ಭವ ಘೋರಾರಣ್ಯ.
ಕದಳಿಯೆಂಬುದ ಗೆದ್ದು ತವೆ ಬದುಕಿ ಬಂದು,
ಕದಳಿಯ ಬನದಲ್ಲಿ ಭವಹರನ ಕಂಡೆನು.
ಭವಗೆಟ್ಟು ಬಂದ ಮಗಳೆಂದು ಕರುಣದಿಂ ತೆಗೆದು ಬಿಗಿಯಪ್ಪಿದರೆ,
ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು

ಎಂದು ನಿಜೈಕ್ಯವನೆಯ್ದಿ ಶಬ್ದಮುಗ್ಧವಾಗಿ ನಿಂದಳು ಮಹಾದೇವಿ, ಜ್ಯೋತಿಯೊಡನಾಡಿ, ಒಡಗೂಡಿ ಕರ್ಪೂರ ಜ್ಯೋತಿಯಾದಂತೆ ಮಹಾದೇವಿಯಕ್ಕ ದಿವ್ಯಜ್ಯೋತಿಯುಂಡ ದಿವ್ಯಜ್ಯೋತಿಯೆ.

# ಭಕ್ತಿ ಭಂಡಾರಿ ಬಸವಣ್ಣನವರು



## ಶರಣ ಸಂದೇಶ

ಕಾರ್ತಿಕದ ಕತ್ತಲು ಆಕಾಶ ದೀಪವಾಗಿ
ನೀ ಬಂದೇ
ಬಟ್ಟೆಗೆಟ್ಟವರಿಗೊಂದು ದಿಕ್ಕಾಗಿ
ಎಂಟು ಶತಮಾನಗಳ ಹಿಂದೆ
ಅಗ್ನಿಖಡ್ಗವನಾಂತ ಓ ಆಧ್ಯಾತ್ಮ ಕ್ರಾಂತಿವೀರ
ದೇವ ದಯೆಯಯೊಂದು ಓ ಧೀರಾವತಾರ
ಶ್ರೀ ಬಸವೇಶ್ವರಾ !

ಎಂದು ರಾಷ್ಟ್ರಕವಿ ಕುವೆಂಪು ಅವರು ವಿಶ್ವಬಂಧು ಜಗಜ್ಯೋತಿ ಜಗದ್ವಂದ್ಯ ಬಸವಣ್ಣನವರನ್ನು ಮನತುಂಬಿ ಹೃದಯ ತುಂಬಿ ಹಾಡಿ ಹೊಗಳಿದ್ದಾರೆ. ಎಂಟ ನೂರು ವರ್ಷಗಳ ಹಿಂದೆ ಹಿಂದೂ ಸಮಾಜವು ಅಜ್ಞಾನ, ಅಂಧಶ್ರದ್ಧೆ, ಉಚ್ಚ ನೀಚ, ಮೇಲುಕೀಳು, ಅಸ್ಪೃಶ್ಯ ಮುಂತಾದ ವಿಕೃತಿಗಳಿಂದ ಹೊಲಬುಗೆಟ್ಟಾಗ ಸಮಗ್ರ ಕ್ರಾಂತಿಯ ಸಂದೇಶ ಹೊತ್ತು ಆಕಾಶದೀಪವಾಗಿ ಅವತರಿಸಿ ಬಂದರು. ಸಮಾಜದಲ್ಲಿ ಅತ್ಯಂತ ಉಪೇಕ್ಷಿತ, ಶೋಷಿತ, ಪತಿತ, ದೀನದಲಿತರಿಗೆ, ಶತಶತ ಮಾನಗಳಿಂದ ಮುಚ್ಚಿದ ಧರ್ಮದ ಮಹಾದ್ವಾರವನ್ನು ತೆರೆದರು. ಭಕ್ತಿಭಂಡಾರ ವನ್ನು ಸೂರೆಗೈದರು. ಭಕ್ತಿ ಗಂಗೆಯನ್ನು ಶ್ರೀ ಸಾಮಾನ್ಯನ ಮನೆಮನೆಗೆ ಮುಟ್ಟಿ ಸಿದರು. ಭಾರತದಲ್ಲಿ ಸಮಗ್ರಕ್ರಾಂತಿ, ಅದು ರಾಜಕೀಯವಾಗಲಿ ಸಾಂಸ್ಕೃತಿಕವಾ ಗಿರಲಿ, ಆರ್ಥಿಕವಾಗಿರಲಿ, ಧರ್ಮದ ಮಾಧ್ಯಮದಿಂದಲೇ ಸಾಧ್ಯವೆಂಬುದನ್ನು ಬಸವಣ್ಣನವರು ಸಿದ್ಧಮಾಡಿ ತೋರಿಸಿದರು. ಸಮಾನತೆಯ ಸಮಗ್ರ ಕ್ರಾಂತಿಗಾಗಿ ಶತಮಾನಗಳಿಂದ ಹಿಂದೂ ಸಮಾಜಕ್ಕೆ ಅಂಟಿಕೊಂಡಿದ್ದ ಅಸ್ಪೃಶ್ಯತೆಯ ಅಭಿಶಾಪ ವನ್ನು ತೊಡೆದು ಹಾಕಲು ಅದ್ಭುತವಾದ ಜನಾಂದೋಲವನ್ನು ಹೂಡಿ, ಅದಕ್ಕಾಗಿ ತನ್ನ ದೇಹವನ್ನೇ ತೆತ್ತ ಆತ್ಮಾರ್ಪಣೆ ಮಾಡಿದ ದೇವಮಾನವ ಬಸವಣ್ಣ.

ಆರ್ಥಿಕ ಆಸ್ತಿವಾದ-ಸಾಮಾಜಿಕವಾಗಿ, ಸಾಂಸ್ಕೃತಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಬಸವಣ್ಣನವರು ಆ ಬದಲಾವಣೆಗಳನ್ನು ತಂದರು. ಅದರಂತೆ ಬಸವಣ್ಣನವರು ತಾವು ಕಟ್ಟಬೇಕೆಂದು ಸಮಾಜದ ಅರ್ಥ ವ್ಯವಸ್ಥೆಯ ಬಗ್ಗೆಯೇ ಮೌಲಿಕವಾಗಿ

ಚಿಂತಿಸಿದರು. ಅವರ ಪ್ರದಿಘನ ಚಿಂತನ ಮಂಥನಗಳ ಫಲವೇ ಕಾಯಕ ಸಿದ್ಧಾಂತ. ಕಾಯಕವೇ ಕಾಮಧೇನು, ಕಾಯಕವೇ ಕಲ್ಪವೃಕ್ಷ, ಕಾಯಕವೇ ಯೋಗ, ಕಾಯಕವೇ ಕೈಲಾಸ. ಭಕ್ತರಲ್ಲಿ ಕುಲ ಹೊಲೆಗಳಲ್ಲಿದ್ದಂತೆ ಕಾಯಕದಲ್ಲಿ ಕೀಳು ಮೇಲಿಲ್ಲ ಭಕ್ತನಿರಲಿ, ಜಂಗಮನಿರಲಿ ಯಾರೇ ಇರಲಿ ಕಾಯಕವಿಲ್ಲದೇ ಇರಕೂಡದು ಎಂದು ಸಾರಿದರು.

ಕಾಯಕದಲ್ಲಿ ನಿರತನಾದರೆ ಗುರುದರುಶನವಾದರೂ ಮರೆಯಬೇಕು
ಲಿಂಗ ಪೂಜೆಯಾದರೂ ಮರೆಯಬೇಕು
ಜಂಗಮ ಮುಂದಿದ್ದರೂ ಹಂಗು ಹರಿಯಬೇಕು

ಕಾಯಕವೇ ಕೈಲಾಸವಾದ ಕಾರಣ ಎಂದು ಶಿವಶರಣರು ಬಸವಣ್ಣನವರ ಕಾಯಕ ಸಿದ್ಧಾಂತವನ್ನು ಎತ್ತಿ ಹಿಡಿದರು. ಸಮಾಜವು ಸ್ವಾವಲಂಬವಾಗಲು ಪರಿಪೂರ್ಣವಾಗಲೂ, ಸಂಪದ್ಭರಿತವಾಗಲು ಕಾಯಕ ಸಿದ್ಧಾಂತದ ಕಟ್ಟುನಿಟ್ಟಾದ ಆಚರಣೆಯಿಂದ ಸಾಧ್ಯ. ಬಸವಣ್ಣನವರ ದೃಷ್ಟಿಯಲ್ಲಿ ಪರೋಪಜೀವನ ಪಾಪ, ಸ್ವಾವಲಂಬನೆ ಪುಣ್ಯ.

ಈ ಕಾಯಕ ಸಿದ್ಧಾಂತವು ವೃತ್ತಿಯನ್ನು ತತ್ವಮಯ ಮಾಡಿದ. ದೇವ ಪೂಜೆಯನ್ನಾಗಿ ಮಾರ್ಪಾಡಿಸಿದ ಕರ್ಮನಿರ್ಮಲ ಮಾಡಿ ಧರ್ಮವನ್ನಾಗಿಸಿದ ಪವಾಡವೆಂದು ಶ್ರೀ ಸಿದ್ಧಯ್ಯ ಪುರಾಣಿಕರು ನುಡಿದಿದ್ದಾರೆ.

ಸಾಧನೆಯ ಶುಚಿತ್ವದ ಬಗ್ಗೆ ಬಸವಣ್ಣನವರು ಒತ್ತು ಕೊಟ್ಟು ಹೇಳಿದರು. ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ ಪಾತ್ರಕ್ಕೆ ಸಲ್ಲದಯ್ಯಾ ಎಂದು ನಿರ್ಮಲ ಕಾಯಕದ ಬಗ್ಗೆ ನಮ್ಮನ್ನು ಎಚ್ಚರಿಸಿದ್ದಾರೆ. ಅಂದು ಬಸವಣ್ಣನವರು ಪ್ರತಿಪಾದಿಸಿದ್ದ ಕಾಯಕ ಸಿದ್ಧಾಂತವು ಇಂದು ಪಾಂಡಿಚೇರಿಯ ಆಶ್ರಮದಲ್ಲಿ ಅಕ್ಷರಶಃ ಯೋಗವಾಗಿ, ಕೈಲಾಸವಾಗಿ ಪರಿಮಿಸಿದ್ದನ್ನು ಕಾರ್ಯಗತವಾದುದನ್ನು ನೋಡಬಹುದು.

ವಚನವಾಙ್ಞಯ ಬಸವಣ್ಣವರಿಗಿಂತ ಬಹು ಮುಂಚಿಯೆ ವಚನ ಸಾಹಿತ್ಯದ ಉಗಮ. ಸಂಪ್ರದಾಯ ಆರಂಭವಾಗಿದ್ದರೂ, ಅದು ತನ್ನ ಪರಮೋನ್ನತಿಯನ್ನು ಪಡೆದುದು ಬಸವ ವಚನಗಳಲ್ಲಿಯೇ. ಬಸವಣ್ಣನವರು ಶ್ರೀ ಸಾಮಾನ್ಯರಿಗೂ ಸರಳ ಸುಲಭವಾಗಿ ಅರ್ಥವಾಗುವ ಕನ್ನಡದ ಈ ವಿಶಿಷ್ಟ ವಚನ ರೂಪವನ್ನು ತಮ್ಮ ಅಧ್ಯಾತ್ಮಿಕ ಅನುಭವಗಳ ಅಭಿವ್ಯಕ್ತಿಗೆ ಸಮರ್ಥ ಮಾಧ್ಯಮವನ್ನಾಗಿ ಮಾಡಿಕೊಂಡು ಸಂಸ್ಕೃತದಲ್ಲಿನ್ನೇನು ? ಎನ್ನುವಂತೆ ಮಾಡಿದರು.

ವಚನ ಸಾಹಿತ್ಯದಲ್ಲಿ ಒಟ್ಟಾರೆ ಕಂಡು ಬರುವ ಮುಖ್ಯ ಹಾಗೂ ವಿಶೇಷ ಲಕ್ಷಣಗಳೆನ್ನೆಲ್ಲಾ ಒಂದೆಡೆ ಕಾಣಬೇಕೆಂದರೆ ಅವೆಲ್ಲಾ ಸಮಗ್ರವಾಗಿ ಗೋಚರವಾಗುವುದು ಬಸವಣ್ಣನವರ ವಚನಗಳಲ್ಲಿಯೇ ಎಂದು ಶಿ. ಶಿ. ಬಸವನಾಳ ನುಡಿದಿದ್ದಾರೆ.

ವಚನಗಳು ನಮ್ಮ ಕನ್ನಡ ಸಾಹಿತ್ಯದ ಉಪನಿಷತ್ತುಗಳು. ಆ ಕವಿಗಳು ನಮ್ಮ ಕನ್ನಡ ನಾಡಿನ ರಸಋಷಿಗಳು. ಆ ರಸ ಋಷಿಗಳ ಉಪದೇಶ ಸಾರ ಸಾಹಿತ್ಯವೇ ದರ್ಶನ. ದರ್ಶನವೇ ಸತ್ಯವೇ ಸೌಂದರ್ಯ. ಸೌಂದರ್ಯವೇ ಸತ್ಯ. ಎಂದು ಎಂ. ಆರ್. ಶ್ರೀ ಅವರು ವಚನಗಳ ಹಿರಿಮೆಯನ್ನು ಹೊಗಳಿದ್ದಾರೆ.

ಇಪ್ಪತ್ತನೆ ಯ ಶತಮಾನದಲ್ಲಿ ಸರ್ವರ ಮನೋಭಿತ್ತಿಯ ಮೇಲೆ ಮೂಡಿರುವ **ವಸುದೈವ ಕುಟುಂಬಕಂ** ಅಂದರೆ ವಿಶ್ವಕುಟುಂಬಿಕ ಭಾವನೆ ಇಂದೇ ಹುಟ್ಟಿ ಬೆಳೆದುದಲ್ಲ. ಏಕಕಾಲಕ್ಕೆ ಋಷಿಗಳು- ಸಂತ ಮಹಂತರು ಮಹಾನ್ ಚಿಂತಕರು ಹುಟ್ಟಿ ಈ ಜಾಗತಿಕ ಭಾವನೆಯನ್ನು ಘೋಷಿಸಿ ಬೆಳೆಸಿದ್ದಾರೆ. ಅದರಲ್ಲಿ ಬಸವಣ್ಣನವರದು ಸಿಂಹಪಾಲು.

ವಿಶ್ವವಂದ್ಯ ಬಸವಣ್ಣನವರನ್ನು ಪಡೆದ ನಾಡು ಧನ್ಯ, ನುಡಿ ಧನ್ಯ, ಜನ ಧನ್ಯ. —**ಶರಣ ಧರ್ಮ ಕೃಪೆಯಿಂದ**

# ಬೆಲೆ ಉಡುಗೆಗಲ್ಲ, ಮನುಷ್ಯನಿಗೆ!

ಪ. ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ, ಮುಚ್ಚಿನ, ದಕ್ಷಿಣ ಕನ್ನಡ.,

ಈಶ್ವರಚಂದ್ರ ವಿದ್ಯಾಸಾಗರರಿಗೆ ಒಂದು ಔತಣ ಕೂಟಕ್ಕೆ ಆಮಂತ್ರಣ ಇತ್ತು. ಆದರೆ ಅವರಿಗೆ ಆ ಸ್ಥಳಕ್ಕೆ ಪ್ರವೇಶ ಸಿಗಲಿಲ್ಲ. ಗೌರವ ದೊರಕಲಿಲ್ಲ. ಅಲ್ಲಿಗೆ ಬಂದಿದ್ದವರೆಲ್ಲರೂ ಬೆಲೆಬಾಳುವ ಸೂಟು, ಬೂಟು ಧರಿಸಿದ ಆಢ್ಯ ಮಹನೀಯರು. ಸಾಧಾರಣ ರೀತಿಯ ಅಂಗಿ, ಬಟ್ಟೆಧರಿಸಿದ್ದ ವಿದ್ಯಾಸಾಗರರನ್ನು ಒಳಗೆ ಹೋಗಲು ಬಿಡಲಿಲ್ಲ- ಬಾಗಿಲಿನಲ್ಲಿ ನಿಂತ ಜವಾನ. ವಿದ್ಯಾಸಾಗರರು ಹಿಂತಿರುಗಿದರು. ಬಾಡಿಗೆಗೆ ಉತ್ತಮವಾದ ಬಟ್ಟೆಗಳನ್ನು ಪಡೆದರು. ಅದನ್ನು ತೊಟ್ಟುಕೊಂಡು ಹೋದಾಗ ಅವರಿಗೆ ಪ್ರವೇಶ ಸಿಕ್ಕಿತು. ಎಲೆಯ ಮುಂದೆ ಊಟಕ್ಕಾಗಿ ಕುಳಿತ ವಿದ್ಯಾಸಾಗರರು ಊಟ ಮಾಡದೆ ಈ ಬಟ್ಟೆಗಳನ್ನು ಕಳಚಿ ಎಲೆಯಮುಂದಿರಿಸಿ, "ನನ್ನ ಕೋಟೇ ಲಾಡುತಿನ್ನು ನನ್ನ ಪ್ಯಾಂಟೇ ಜಿಲೇಬಿ ತಿನ್ನು "ಎಂದು ಹೇಳತೊಡಗಿದರು. ಬಂದವರೆಲ್ಲ ಆಶ್ಚರ್ಯದಿಂದ, ಇದೇನು ಮಾಡುತ್ತಿದ್ದೀರಿ ? 'ಎಂದು ಕೇಳಿದರು.

"ಇಲ್ಲಿ ಶ್ರೀಮಂತ ಉಡುಪು ತೊಟ್ಟವರಿಗೆ ಮಾತ್ರ ಪ್ರವೇಶ, ಗೌರವ ಎಂದು ತಿಳಿಯಿತು. ವ್ಯಕ್ತಿಗೆ ಬೆಲೆ ಇಲ್ಲ, ಉಡುಪಿಗೆ ಅಂದ ಮೇಲೆ ನಾನು ಉಣ್ಣಲು ಸಾಧ್ಯವೆ? ಈ ಉಡುಪುಗಳೇ ಭೋಜನ ಮಾಡಬೇಕು ತಾನೆ? "ವಿದ್ಯಾಸಾಗರರು ಹೀಗೆಂದರು.

ಇಂಥದೇ ಪ್ರಸಂಗ ಪುರಾಣದಲ್ಲೂ ಇದೆ. ಅಷ್ಟಾವಕ್ರ ಮುನಿಯು ದಿವ್ಯಜ್ಞಾನಿ- ಯಾದರೂ ವಕ್ರಶರೀರಿಯಾದ್ದರಿಂದ ಕುರೂಪಿಯಾಗಿದ್ದ. ಅವನೊಮ್ಮೆ ದೇವೇಂದ್ರನ ಸಭೆಗೆ ಹೋದಾಗ ಎಲ್ಲರೂ ಅವನನ್ನು ಕಂಡು ಬಿದ್ದು ಬಿದ್ದುನಕ್ಕರಂತೆ. ಮುನಿಯು ಕೋಪಗೊಳ್ಳುವ ಬದಲು ಅವರಂತೆಯೆ ತಾನೂ ಗಹಗಹಿಸಿ ನಗತೊಡಗಿದ.

ಆಗ ಅವನೊಂದಿಗೆ ಸಭೆಯಲ್ಲಿದ್ದವರು, "ಮುನಿಯೇ ನಿನ್ನ ವಕ್ರವಿನ್ಯಾಸದ ಶರೀರ ಬಾಗಿದ ಬೆನ್ನು, ಜೋತಾಡುವ ತೊಗಲು, ಮೂಳೆ ಚಕ್ಕಳ ಕಂಡು ನಮಗೆ ನಗು ಬಂತು. ಆದರೆ ನಿನಗೆ ನಗು ಬಂದ ಕಾರಣ ತಿಳಿಯಲಿಲ್ಲ ಎಂದು ಹೇಳಿದರು.

'ಇದು ಇಂದ್ರನ ಸಭೆಯಾದರೂ ಇಲ್ಲಿರುವವರು ಚಮ್ಮಾರರು, ಕಟುಕರು, ಎಲ್ಲಕ್ಕಿಂತ ಹೆಚ್ಚಾಗಿ ಅಂಧರು ಎಂದು ತಿಳಿದು ನಕ್ಕು ಬಿಟ್ಟೆ ಎಂದ ಅಷ್ಟಾವಕ್ರ,

ಅವರಿಗೆಲ್ಲ ಕೋಪಬಂತು. "ನಾವೆಲ್ಲ ದೊಡ್ಡವರು, ಮರ್ಯಾದಸ್ಥರು. ಆದರೆ ನಮ್ಮನ್ನು ಹೀಗೆ ಆರೋಪಿಸಿ ಅವಮಾನಿಸುತ್ತಿದ್ದೀಯಲ್ಲ?" ಎಂದು ಆಕ್ಷೇಪಿಸಿದರು.

ಅಣ್ಣಗಳಿರಾ, ಕೋಪಿಸಬೇಡಿ, ನೀವು ನನ್ನ ಮೈಯಲ್ಲಿರುವ ಮಾಂಸಕ್ಕೆ ಬೆಲೆ ಕಟ್ಟಿದಿರಿ, ಚರ್ಮವನ್ನು ಅಳತೆ ಮಾಡಿದಿರಿ. ಆದ್ದರಿಂದ ಚಮ್ಮಾರರು, ಕಟುಕರು ಎಂದು ಹೇಳಿದ. ನನ್ನಲ್ಲಿರುವ ಪರಮಜ್ಞಾನವನ್ನು ಹೃದಯ ಪರಿಶುದ್ಧತೆಯನ್ನು ಒಬ್ಬರೂ ಕಾಣಲಿಲ್ಲ. ಅದಕ್ಕೇ ಕುರುಡರೆಂದು ಹೇಳಿದೆ. ತಪ್ಪೇನಿದೆ? ಎಂದು ಮುನಿಯು ಶಾಂತವಾಗಿ ಹೇಳಿದ. ತಮ್ಮ ವರ್ತನೆಗೆ ನಾಚಿ ಎಲ್ಲರೂ ತಲೆತಗ್ಗಿಸಿದರು.

ಗುರೂಜಿ ಗೊಲ್ವಾಲ್‌ಕರ್ ಒಂದುಸಲ ಸಂಗಾತಿಗಳೊಂದಿಗೆ ಹೋಗುತ್ತಿದ್ದಾಗ ಬಡವನೊಬ್ಬ ಆದರದಿಂದ ಕರೆದು ಸಂಕೋಚದಿಂದ ಚಹಾ ನೀಡಿದ. ಚಹಾಕ್ಕೆ ಹಾಲು, ಸಕ್ಕರೆ ಸರಿಯಾಗಿ ಹಾಕಿರಲಿಲ್ಲ. ಆದರೂ ಗುರೂಜಿ ಪ್ರೀತಿಯಿಂದ ಅದನ್ನು ಸೇವಿಸಿದರು. ಮುಂದೆ ಬಂದಾಗ ಸಂಗಾತಿಗಳು, 'ಗುರೂಜಿ ಅವನು ಕೊಟ್ಟ ಚಹಾವನ್ನು ತಾವು ಕುಡಿದಿರಾ? ಅವನ ಕೈಗಳು ಕುಷ್ಠವ್ಯಾಧಿಯಿಂದ ಗಲೀಜಾಗಿದ್ದವು. ಮೈಕೈಗಳು ಹೊಲಸಾಗಿದ್ದವು. ತಾವೇಕೆ ಗಮನಿಸಲಿಲ್ಲ? ಎಂದು ಆಕ್ಷೇಪಿಸಿದರು.

ಅದೊಂದೂ ಕಾಣಿಸಲಿಲ್ಲವಲ್ಲ! ನಾನು ಕಂಡದ್ದು ನಿಷ್ಕಲ್ಮಷವಾದ ಹೃದಯವನ್ನು ಮಾತ್ರ. ಆದರಿಂದ ಹೊಮ್ಮಿದ ಪ್ರೀತಿಯೆದುರು ಇನ್ನೇನೂ ಕಾಣಿಸಲಿಲ್ಲ. ಆದುದರಿಂದ ಚಹಾ ರುಚಿ ಕೂಡ ನನಗರಿವಾಗದೆ ಹೋಯಿತು' ಎಂದರು ಗುರೂಜಿ.

ಇತ್ತೀಚಿಗಿನ ಒಂದು ಉದಾಹರಣೆ ನೋಡಿ. ಜಗತ್ಪ್ರಸಿದ್ಧಿಗೆ ಪಾತ್ರರಾದ ಭಾರತದ ಚಿತ್ರಕಲಾವಿದ ಎಂ.ಎಫ್ ಹುಸೇನ್ ಒಂದು ಸಮಾರಂಭಕ್ಕೆ ಹೋದಾಗ ಚಪ್ಪಲಿ ಧರಿಸಿರಲಿಲ್ಲ. ಎಂಬ ಕಾರಣಕ್ಕಾಗಿ ಅವರಿಗೆ ಪ್ರವೇಶ ನಿರಾಕರಿಸಿದರಂತೆ.

ಸನಾತನ ಸಂಸ್ಕೃತಿಗೆ ಪ್ರಸಿದ್ಧವಾದ ಭಾರತದಲ್ಲಿ ಅನ್ಯ ನಾಗರಿಕತೆಯ ಪ್ರವೇಶ ದಿಂದಾಗಿ ಎಲ್ಲೆಡೆ ನಾವೀಗ ಕಾಣುತ್ತಿರುವ ವಿಪರ್ಯಾಸಕ್ಕೆ ಹಲವು ಉದಾಹರಣೆಗಳನ್ನ ಹೇಳಬಹುದು. ಸಾದಾ ಅಂಗಿ ಧರಿಸಿ ಸರಕಾರಿ ಕಛೇರಿಗೆ ಹೋದವನಿಗೆ ನೌಕರರು ಯಾವ ಬೆಲೆಯೂ ನೀಡದೆ ಸತಾಯಿಸುತ್ತಾರೆ. ಜರ್ಬಿನ ಪ್ಯಾಂಟು, ಸೂಟುಗಳನ್ನು ಧರಿಸಿ ಹೋದರೆ ಮಾತ್ರ ಕೆಲಸವಾಗುತ್ತದೆ ಎನ್ನುವ ದುಸ್ಥಿತಿ ನಿರ್ಮಾಣವಾಗಿದೆ.

ಸಮಾಜದಲ್ಲಿ ಒಳ್ಳೆಯ ಹೃದಯಕ್ಕೆ ಜ್ಞಾನಕ್ಕೆ ಬೆಲೆ ಇಲ್ಲ. ಆತ ಧರಿಸಿದ ಉಡುಪು ಪ್ರತಿಷ್ಠೆಯ ಹೆಗ್ಗುರುತು ಅನಿಸಿಕೊಳ್ಳುತ್ತಿದೆ ಶಾಲೆಗಳಲ್ಲೂ ಶಿಸ್ತಿನ ಹೆಸರಿಲ್ಲ. ಧರಿಸಲು ಕಡ್ಡಾಯಗೊಳಿಸುವ ಸಮವಸ್ತ್ರಪಾಲಕರಿಗೆ ನುಂಗಲಾರದ ಒಂದು ತುತ್ತಾಗುವುದರೊಂದಿಗೆ ಎಳೆಯ ವಯಸ್ಸಿನಲ್ಲೆ ಉಡುಪಿನ ವಿಷಬೀಜವನ್ನು ಬಿತ್ತುವಂತೆ ಕೆಟ್ಟಪ್ರಯತ್ನಕ್ಕೆ ಉದಾಹರಣೆಯಾಗಿದೆ. ಉಡುಪು ಸದಾ ಆಗಿರುವುದು ಹುಂಬತನದ ದಾರಿದ್ರ್ಯದ ಕುರುಹೆಂದು ತಿಳಿದು ಅಂಥವರನ್ನು ಅಗೌರವದಿಂದ ಕಾಣುವ ಪ್ರವೃತ್ತಿ ವಿದ್ಯಾವಂತರಲ್ಲೂ ಇರುವುದು ವಿಷಾದ ಸಂಗಾತಿಯಾಗಿದೆ.

ಸರಳ ಉಡುಪು ಸರಳಮನೋಭಾವ ಇಂದಿನ ಅಗತ್ಯಗಳಲ್ಲೊಂದು. ಗಾಂಧೀಜಿ ಕೂಡ ದುಂಡು ಮೇಜಿನ ಪರಿಷತ್ತಿಗೆ ಹೋದಾಗ ಅರೆಬೆತ್ತಲೆ ಫಕೀರರಂತೆಯೇ ಇದ್ದರು. ಇದೇಕೆ ಹೀಗಿದ್ದೀರಿ ಎಂದು ನಗೆಯಾಡಿದ ವ್ಯಕ್ತಿಗೆ ಅವರು ಸಿಂಹಾಸನದಲ್ಲಿ ಆಸೀನನಾಗಿದ್ದ ದೊರೆಯನ್ನು ತೋರಿಸಿ, 'ನನ್ನಂಥ 3 ಜನರಿಗೆ ಸಾಲುವಷ್ಟು ಉಡುಪು ಆವರೊಬ್ಬರ ಮೈಯಲ್ಲಿ ಇದೆ. ಹಾಗಾಗಿ ನಾನು ಹೀಗಿದ್ದೇನೆ' ಎಂದರು,

ಅತಿ ಭರ್ಜರಿಯ ಉಡುಪಿನ ವ್ಯಾಮೋಹ, ಅದರ ಸಂಪಾದನೆಯೊಂದರಿಂದ ಸಮಾಜದಲ್ಲಿ ಗೌರವ ಸ್ಥಾನ ಪಡೆಯಬಹುದೆಂಬ ಕಲ್ಪನೆ ಅನೇಕರದು. ಅತಿಕ್ಷಣದ ಸಮಾರಂಭದಲ್ಲಿ ಉಡಲೆಂದು ಸಹಸ್ರಾರು ರೂಪಾಯಿಗಳನ್ನು ಉಡುಪಿಗಾಗಿ ಸುರಿಯುವ ಬದಲು ಅದನ್ನು ಬಡ ವಿದ್ಯಾರ್ಥಿಗಳ ಪುಸ್ತಕಗಳಿಗಾಗಿ, ತುತ್ತಿಗೆ ಗತಿಯಿಲ್ಲದವರ ದಾಸೋಹಕ್ಕೆ ಬಳಸಬಹುದು. ಸಿರಿವಂತಿಕೆಯ ಪ್ರದರ್ಶನಕ್ಕೆ ಗೌರವ ನೀಡುವಂಥ ಸಂಕುಚಿತ ಧೋರಣೆ ಎಷ್ಟು ಸರಿ ಯೋಚಿಸಿ.

---

## ಸುಂದರ ಕುಸುಮಗಳು

– ಎಚ್. ಗವಿಸಿದ್ಧಯ್ಯ, ಅವತಿ ದೇವನಹಳ್ಳಿ ತಾ||.

ಮಿನುಗುವ ಚುಕ್ಕಿಗಳ ಕಂಡು ನಲಿಯುವ ಮನ
ಕೊನರದ ಆಸೆ ಹೊತ್ತು ಬರಡು ನೆಲದ ಮೇಲೆ
ಅಲೆದಾಡುವ ಚುಕ್ಕಿಗಳ ಕಂಡು ಮರುಗುವುದು
ಯಾರ 'ಪಾಪದ ಫಲ'ವೆಂದು ಮೂಗು ಮುರಿಯದಿರಿ
ನಮ್ಮೆಲ್ಲರಂತೆ ನಾಳಿನ ಆಸೆಹೊತ್ತು
ಈ ಸುಂದರ ಜಗತ್ತಿಗೆ ಪಾದ ಬೆಳೆಸಿದ
ಸುಂದರ ಕುಸುಮಗಳು ಚಿವುಟದಿರಿ ಮೊಗ್ಗಿನಲಿ ಗರ್ಭದಲಿ
ವಿಜ್ಞಾನ ಬೆಳೆದಿಹುದು ಅದರೊಂದಿಗೆ ಬೆಳೆಯಲು ಬಿಡಿ
ಮಾನವೀಯತೆ ಸನಾತನ ಧರ್ಮವನು
ಬಲಿಕೊಡದಿರಿ ಸಂತೆಯಲ್ಲಿಟ್ಟು ಮಾರದಿರಿ

# ಗಂಗಾ—ಕಾವೇರಿ ಕಾಲುವೆ

—ಗಂಗಾರಾಂ ಚಂಡಾಳ, ಸರ್ಕಾರಿ ಪಾಲಿಟೆಕ್ನಿಕ್, ಚನ್ನಪಟ್ಟಣ, ಬೆಂ. ಗ್ರಾಮಾಂತರ ಜಿಲ್ಲೆ.

ಇದು ಸುಮಾರು 2600 ಕಿ. ಮೀ. ಉದ್ದ, 20 ಅಡಿ ಆಳ, 75 ಅಡಿ ಅಗಲ ವಿದ್ದು ಬಿಹಾರದ ಪಾಟ್ನಾದಿಂದ ಕನ್ಯಾಕುಮಾರಿ ಹತ್ತಿರದವರೆಗೆ ಹರಿಯುತ್ತದೆ. ಪಾಟ್ನಾದ ಹತ್ತಿರ ಗಂಗಾನದಿಗೆ ಒಂದು ಅಣೆಕಟ್ಟು ನಿರ್ಮಿಸುವುದರ ಮೂಲಕ ಈ ಯೋಜನೆ ಆರಂಭವಾಗುತ್ತದೆ. ಇಲ್ಲಿ ಸುಮಾರು 60,000 ಕ್ಯೂಸೆಕ್ಸ್ ನೀರನ್ನು ಗಂಗಾ ನದಿಯಿಂದ ಈ ಕಾಲುವೆಗೆ ಹರಿಯಬಿಡಲಾಗುವುದು. ಇದರಲ್ಲಿ 10,000 ಕ್ಯೂಸೆಕ್ಸ್ ನೀರನ್ನು ಉತ್ತರಪ್ರದೇಶ ಮತ್ತು ಬಿಹಾರದ ಬರಡು ಪ್ರದೇಶಗಳಿಗೆ ಒದಗಿಸಲಾಗುತ್ತದೆ. ಇದರಿಂದ ಈ ಪ್ರದೇಶದ 40,000 ಎಕರೆ ಭೂಮಿ ನೀರಾವರಿಗೆ ಒಳಪಡುತ್ತದೆ. ಉಳಿದ 50,000 ಕ್ಯೂಸೆಕ್ಸ್ ನೀರನ್ನು 150 ದಿನವೂ ರಾಜಸ್ಥಾನ ಗುಜರಾತ್, ಮಧ್ಯಪ್ರದೇಶ, ಮಹಾರಾಷ್ಟ್ರ, ಆಂಧ್ರಪ್ರದೇಶ, ಕರ್ನಾಟಕ ಮತ್ತು ತಮಿಳುನಾಡಿಗೆ ಒದಗಿಸಲಾಗುತ್ತದೆ. ಈ ನೀರು ದಕ್ಷಿಣದ ಕೆಲವು ನದಿಗಳು ಮತ್ತು ಅಣೆಕಟ್ಟುಗಳನ್ನು ಹಾದು ಬರುತ್ತದೆ.

ಬ್ರಿಟೀಷರ ಆಡಳಿತ ಕಾಲದಲ್ಲಿ ಮಾನವತಾ ವಾದಿಯಾಗಿದ್ದ ಇಂಜನೀಯರ್ ಒಬ್ಬರು ಈ ಯೋಜನೆಯನ್ನು ಸಿದ್ದಪಡಿಸಿದರು. ಇದರಿಂದ ಸಿಟ್ಟಿಗೆದ್ದ ಬ್ರಿಟೀಷರು ಆತನನ್ನು ಕೆಲಸದಿಂದ ತೆಗೆದು ಹಾಕಿದರು. ಅಲ್ಲಿಂದ ಈ ಯೋಜನೆ ಮೂಲೆಗುಂಪಾಯಿತು. 1979ರಲ್ಲಿ ಡಾ॥ ಕೆ.ಎಸ್. ಸಾಬ ಅವರು ಕೇಂದ್ರ ನೀರಾವರಿ ಸಚಿವರಾದರು. ಅವರು ವಿಶ್ವಸಂಸ್ಥೆಯಿಂದ ತಜ್ಞರನ್ನು ಕರೆಸಿ ಈ ಯೋಜನೆಯ ಸಾಧ್ಯಾ ಸಾಧ್ಯತೆಯ ಬಗ್ಗೆ ವರದಿ ಕೇಳಿದರು. ಆ ತಜ್ಞರು ಈ ಯೋಜನೆಯು ಭಾರತಕ್ಕೆ ಉಪಯುಕ್ತ ಹಾಗೂ ಜಾರಿಗೊಳಿಸಲು ತಾಂತ್ರಿಕವಾಗಿ ಯಾವುದೇ ಸಮಸ್ಯೆ ಇಲ್ಲ ಎಂದರು.

ಒಂದು ವರದಿಯ ಪ್ರಕಾರ 1972 ರ ವೇಳೆಯಲ್ಲಿ ಈ ಯೋಜನೆಗೆ ತಗಲುವ ವೆಚ್ಚ ರೂ. 2500 ಕೋಟಿಗಳು. 1996 ನೇ ಇಸವಿಗೆ ಲೆಕ್ಕ ಹಾಕಿದರೆ ರೂ. 40,000 ಕೋಟಿಗಳು. ಅಂದರೆ ನಮ್ಮ ದೇಶ ವರ್ಷಪೂರ್ತಿ ನೀಡುವ ಬಡ್ಡಿ ಎರಡು ಪಟ್ಟು ಮಾತ್ರ. ಆದರೆ, ಇದು ತೆಗೆದುಕೊಳ್ಳುವ ಯೋಜನಾ ಅವಧಿ 30 ವರ್ಷಗಳು. ಎರಡು ಲೋಕಸಭಾ ಚುನಾವಣೆಗಳಿಗೆ ಅನಧಿಕೃತವಾಗಿ ಖರ್ಚಾಗುವ ಹಣಕ್ಕೆ ಸಮನಾದದು ಈ ಮೊತ್ತ.

ಈ ಯೋಜನೆಯಿಂದ ಸುಮಾರು 100,40,009 ಎಕರೆ ಭೂಮಿಗೆ ನೀರು ಒದಗಿಸಬಹುದು ಗಂಗಾನದಿ ಬಯಲಿನಲ್ಲಿ ಸುಮಾರು 40 ಲಕ್ಷ ಎಕರೆ ಜಮೀನು ನೀರಾವರಿಗೆ ಒಳಪಡುತ್ತದೆ.

ಈ ಯೋಜನೆಯಿಂದ ಹೊಸ ಉದ್ಯೋಗಗಳ ಸೃಷ್ಟಿ, ಅಸಂಘಟಿತ ಕೃಷಿ ಕಾರ್ಮಿಕರಿಗೆ ವೇತನಗಳಲ್ಲಿ ಹೆಚ್ಚಳ, ನೆರೆಹಾವಳಿ ತಹಬಂದಿಗೆ ಬರುತ್ತದೆ. ರಾಷ್ಟ್ರೀಯ ಸಂಪರ್ಕಜಾಲ ಕಾಲುವೆ ಉದ್ದಗಲಕ್ಕೂ ಹಬ್ಬುತ್ತದೆ, ಇದರಿಂದ ಕೆಲವು ವಾಣಿಜ್ಯ ವಸ್ತುಗಳ ಸಾಗಣಿಕೆ ನಿಲ್ಲಲಿದೆ. ಆಹಾರ ಉತ್ಪಾದನೆಯಲ್ಲೂ ಸಹ ಗಣನೀಯ ಹೆಚ್ಚಳವಾಗಲಿದೆ. ಕೆರೆಕುಂಟೆಗಳಿಗೆ ಹೆಚ್ಚು ನೀರು ಬರುವುದರಿಂದ ವ್ಯವಸ್ಥಿತವಾದ ಪ್ರವಾಸೋದ್ಯಮ, ಮೀನು ಉದ್ಯಮ ನಡೆಸಬಹುದು. ಕಾಲುವೆ ಹರಿಯುಡೆಗಳಲ್ಲಿ ಜಲಾನಯನ ಪ್ರದೇಶ ಹೆಚ್ಚಾಗಿ ಅಂತರಜಲದ ಮಟ್ಟ ಮೇಲೆ ಬರುತ್ತದೆ. ಹಲವು ಪಟ್ಟಣ, ನಗರಗಳ ನೀರಿನ ಸಮಸ್ಯೆಯನ್ನು ನೀಗಿಸಬಹುದು. ಹಲವು ರಾಜ್ಯಗಳ ಮಧ್ಯ ಇರುವ ನದಿನೀರಿನ ವ್ಯಾಜ್ಯಗಳನ್ನು ಶಾಂತಿಯಿಂದ ಪರಿಹರಿಸಿಕೊಳ್ಳಬಹುದು.

(ಸೌಜನ್ಯ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ....583 211)

## ಸುಭಾಷಿತ

ನೀವು ಏನೆ ಮಾಡಿ, ಹಣಗಳಿಸುವ
ಹವ್ಯಾಸಕ್ಕೆ ಮಾತ್ರ ಹೋಗಬೇಡಿ ನೀವು
ಮಾಡುವ ಕೆಲಸ ಹೆಚ್ಚು ಹೆಚ್ಚು ಚೆನ್ನಾಗಿ
ಆಗುತ್ತ ಹೋದ ಹಾಗೆ ನಿಮಗೆ ಹಣ
ತಾನಾಗಿಯೇ ಹರಿದು ಬರುತ್ತದೆ.

ಲಾರ್ಡ್ ರೂಟ್ಸ್

ಶಾಂತಿ ಎಂಬುದು ನಕ್ಷೆಗಳನ್ನು ಪರಿವ
ರ್ತಿಸುವುದರಿಂದ ಬರುವುದಿಲ್ಲ ಮನುಷ್ಯ
ನನ್ನು ಪರಿವರ್ತಿಸುವುದರಿಂದ ಮಾತ್ರ ಬರುತ್ತದೆ.

ಗ್ರಿಫಿತ್

# ನಾಳೆ ಮಾಡೋಣ

— ಬಿ. ಸುಬ್ರಾಯ ಅಡಿಗ, ನಿವೃತ ಶಿಕ್ಷಕರು, ಸಂಡೂರು, ಬಳ್ಳಾರಿ ಜಿಲ್ಲೆ.

ಬಾಲ್ಯದ ಸಂಗತಿ. ಯಾವುದೋ ಕೆಲಸವನ್ನು ಅದೇ ದಿನ ಮಾಡಿ ಮುಗಿಸ ಬೇಕಿತ್ತು. ಅದರಲ್ಲಿ ಒಬ್ಬ ಸಂಗಾತಿಯ ನೆರವು ಅಗತ್ಯವಾಗಿತ್ತು. ಅವನ ಬಳಿ ಹೋಗಿ ಸಹಾಯ ಕೇಳಿದಾಗ "ಇಷ್ಟೇಕೆ ಆವಸರ? ಮಾಡಿದರಾಯಿತು." ಎಂದು ರಾಗವೆಳೆದ ಹೀಗಾಗಿ ಆ ಕೆಲಸ ತುಂಬಾ ಮುಂದೆ ಹೋಯಿತು. ಇದರಿಂದ ನಾನು ಬಹಳಷ್ಟು ಹಾನಿ ಅನುಭವಿಸಬೇಕಾಯಿತು.

ನನ್ನ ಬಳಿ ಗೆಳೆಯನೊಬ್ಬನ ಪತ್ರ ಬಂದಿತ್ತು. ಬಳ್ಳಾರಿಯಲ್ಲಿನ ಅವನ ಸಂಬಂಧಿಕನಿಗೆ ಅಗತ್ಯದ ಮಾಹಿತಿ ತಿಳಿಸಬೇಕಿತ್ತು. ಹೂಂ... ನಾಳೆ ಬರೆದರಾಯಿತು ಎಂದು ಆ ಪತ್ರವನ್ನು ತೆಗೆದಿರಿಸಿದೆ. ಮತ್ತೆ ಮರೆತೇಹೋಯಿತು. ಮೂರುದಿನಗಳ ಮೇಲೆ ನೆನಪಾದಾಗ, ಬಳ್ಳಾರಿಗೆ ಪತ್ರ ಬರೆದು ತಿಳಿಸುವಷ್ಟರಲ್ಲೇ ಕೊನೆಯ ದಿನಾಂಕ ಮುಗಿದು ಹೋಗುವುದೆಂದು ಮನಗಂಡು, ನಾನು ಸ್ವತಃ ಬಳ್ಳಾರಿಗೆ ಹೋಗಿ ಆ ಮಿತ್ರ ನನ್ನು ಕಂಡು ಬೇಕಾದ ಮಾಹಿತಿ ಪೂರೈಸಿದೆ. ಒಂದು ಸಾಮಾನ್ಯ ಪತ್ರದಿಂದಾಗುವ ಕೆಲಸಕ್ಕೆ ನಾನು ಪೂರ್ತಿ ಒಂದು ದಿನ ಹಾಳುಗೆಡಹಬೇಕಾಯಿತು. ಅಲ್ಲದೆ ಬಳ್ಳಾರಿಗೆ ಹೋಗಿ ಬರುವ ವೆಚ್ಚವನ್ನು ವ್ಯರ್ಥವಾಗಿ ಮಾಡಬೇಕಾಯಿತು. ಇದು ನಮ್ಮ ಅಸಡ್ಡೆಯ ದುಷ್ಪರಿಣಾಮವಲ್ಲವೆ ?

ವ್ಯಾಪಾರಿಗಳು ವ್ಯಾಪಾರದಲ್ಲಿ ನಷ್ಟ ಅನುಭವಿಸುತ್ತಾರೆ. ಏಕೆಂದರೆ ಅವರು ತಕ್ಕ ವೇಳೆಯಲ್ಲಿ ಸರಿಯಾದ ನಿರ್ಣಯ ಕೈಗೊಳ್ಳುವುದಿಲ್ಲ. ಕೆಲಸವನ್ನು ಮುಂದೆ ಹಾಕುವುದರಿಂದ ನಾವು ನಮ್ಮ ಮಾನಸಿಕ ಸುಖಶಾಂತಿ ಕಳೆದುಕೊಳ್ಳುತ್ತೇವೆ. ವಿಚಿತ್ರವಾದ ಉದ್ವಿಗ್ನಮನಃಸ್ಥಿತಿ ಉಂಟಾಗುತ್ತದೆ.

ಕೆಲಸ ಮುಂದೆ ಹಾಕುವ ಪ್ರವೃತ್ತಿ ಕೆಲವೊಮ್ಮೆ ಅಪಾಯಕಾರಿ ಎನಿಸುತ್ತದೆ. ಆದರೆ ಅದರಿಂದ ಪಾರಾಗುವುದೂ ಕಷ್ಟ. ಕೆಲಸ ಒಂದಿಷ್ಟು ಕಷ್ಟವಾದುದೆಂಬ ಭಾವನೆ ತಲೆದೋರುತ್ತಲೇ ನಾವದನ್ನು ಮುಂದಕ್ಕೆ ಹಾಕುತ್ತೇವೆ. ಸುಲಭವಾದ ಕೆಲಸಗಳನ್ನಷ್ಟೇ ಮಾಡಿ ಮುಗಿಸುತ್ತೇವೆ. ಈ ರೀತಿ ಮುಂದಕ್ಕೆ ಹಾಕಿದ ಕೆಲಸಗಳ ಸೂಚಿ ಉದ್ದವಾಗುತ್ತ ಹೋಗುತ್ತದೆ. ಆಗ ಅವೆಲ್ಲವನ್ನು ಮುಗಿಸಲಾಗದೆ ನಾವು ಚಿಂತಿತರಾಗುತ್ತೇವೆ. ನಮ್ಮ ನಿದ್ದೆ ಹಾರಿ ಹೋಗುತ್ತದೆ. ಜನಹೆಚ್ಚಾಗಿ ಸುಲಭಪತ್ರಗಳಿಗೆ ಬೇಗ ಉತ್ತರ ಬರೆಯುತ್ತಾರೆ. ಕಷ್ಟದ ಕೆಲಸಗಳನ್ನು "ನಾಳೆ"ಗೆ ಮುಂದೂಡುತ್ತಾರೆ. ಈ "ನಾಳೆ" ಎಂದೂ ಬರುವುದಿಲ್ಲ ಹೀಗೆ ದಿನಗಳಷ್ಟೇ ಅಲ್ಲ ಮಾಸಗಳೂ ಉರುಳುತ್ತವೆ. ಈ ವಿಳಂಬದ ದುಷ್ಪರಿಣಾಮವನ್ನು ತಪ್ಪದೆ ಅನುಭವಿಸಬೇಕಾಗುತ್ತದೆ.

ಈ ಪ್ರವೃತ್ತಿಯಿಂದ ಬಿಡುಗಡೆ ಹೊಂದುವುದೂ ನಮ್ಮ ಕೈಯಲ್ಲೇ ಇದೆ. ಮಾನಸಿಕ ಉದ್ವೇಗ ಹೆಚ್ಚುವುದರಿಂದ ನಮ್ಮ ಆರೋಗ್ಯ ಕೆಡುತ್ತದೆ. ಹಲವು ರೋಗಗಳಿಗೆ ಮಾನಸಿಕ ಉದ್ವಿಗ್ನತೆಯೇ ಮೂಲಕಾರಣ. ಮಾಡದ ಹಾಗೂ ಅಪೂರ್ಣ ಕೆಲಸದ ಭಾರ ನಮ್ಮ ಅವಚೇತನ ಮನದಲ್ಲಿ ಉಳಿದುಕೊಳ್ಳುತ್ತದೆ. ಆಗ ನಾವು ಆಫೀಸಿನಲ್ಲಾಗಲೀ ಮನೆಯಲ್ಲಾಗಲೀ ನಮ್ಮೊಡನೆ ವ್ಯವಹರಿಸುವ ಜನರೊಡನೆ ಒರಟಾಗಿ ವರ್ತಿಸುತ್ತೇವೆ. ಇದರ ದುಷ್ಪರಿಣಾಮ ದಾಂಪತ್ಯ ಸಂಬಂಧಗಳಲ್ಲೂ ಕಾಣಿಸಬಹುದು. ಮನುಷ್ಯ ವಿಷಮ ಚಕ್ರದಲ್ಲಿ ಸಿಲುಕುತ್ತಾನೆ. ಹಾಗಿರುವಾಗ ಇದರಿಂದ ಪಾರಾಗಲೂ ಅದೇಕೆ ಯತ್ನಿಸಬಾರದು ?

ಇದು ಜನ್ಮಜಾತ ಪ್ರವೃತ್ತಿಯೆಂದಾಗಲೀ ಗುಣವಾಗದ ರೋಗವೆಂದಾಗಲೀ ಭಾವಿಸುವುದು ಸರಿಯಲ್ಲ. ಇದೊಂದು ಕೆಟ್ಟ ಅಭ್ಯಾಸ ಮಾತ್ರ. ಇತರ ಅಭ್ಯಾಸಗಳಂತೆಯೇ ಇದನ್ನು ದೂರಗೊಳಿಸುವುದು ಸಾಧ್ಯ. ಇದು ನಮ್ಮನ್ನು ಮುರಿಯುವುದಕ್ಕೆ ಮೊದಲೇ ನಾವು ಇದನ್ನು ಮುರಿದು ಬಿಡಬೇಕು.

**ಅತಿ ದೊಡ್ಡ ಶತ್ರು :–** ಸುತ್ತಲೂ ನೋಡುವಾಗ "ನಾಳೆಮಾಡೋಣ" ಎಂಬ ಸರಪಳಿಯನ್ನು ಕಡಿದುಕೊಂಡು ಹೊರ ನಡೆದವರೇ ಸುಖಿಗಳಾಗಿದ್ದಾರೆಂಬ ಅಂಶ ತಿಳಿದು ಬರುತ್ತದೆ. ತಮ್ಮ ಕೆಲಸವನ್ನು ಅವರು ಬಹು ಬೇಗನೆ ಉತ್ಸಾಹದಿಂದ ಮುಗಿಸಿ ಬಿಡುತ್ತಾರೆ.

ಮೊತ್ತ ಮೊದಲು ನಾವು ಈ ರೋಗದಿಂದ ಮುಕ್ತರಾಗಲು ದೃಢ ನಿರ್ಧಾರ ಮಾಡಿಕೊಳ್ಳಬೇಕು. ನಾವು ಸ್ವಸ್ಥರಾಗಿರಬೇಕಿದ್ದರೆ ಇದನ್ನು ದೂರಗೊಳಿಸಲೇಬೇಕು. ಚಿಂತೆ, ಕಳವಳ, ಸಮಸ್ಯೆ ಇವೆಲ್ಲ ನಮ್ಮ ಆರೋಗ್ಯದ ಶತ್ರುಗಳು. ಹೊಣೆಗಾರಿಕೆಯಿಂದ ನುಣುಚಿಕೊಂಡಾಗ ಇವೆಲ್ಲವೂ ಹುಟ್ಟಿಕೊಳ್ಳುವುದರಿಂದ "ನಾಳೆ ಮಾಡೋಣ" ಎಂಬುದನ್ನೇ ನಾವು ಮರೆತು ಬಿಡುವುದುಲೇಸು.

**ಯೋಜನಾ ಬದ್ಧ ಜೀವನ:–** ಈ ನಿರ್ಧಾರದ ಬಳಿಕ ಯೋಜನೆ ಹಾಕಿಕೊಂಡು ನಾವು ಅದರಂತೆಯೇ ನಡೆದುಕೊಳ್ಳುವ. ಯೋಜನಾಬದ್ಧ ಜೀವನವೇ ಕುಶಲ ಜೀವನ. ಇಂದು ಮಾಡುವ, ನಾಳೆ ಮಾಡುವ ಹಾಗೂ ಒಂದು ತಿಂಗಳ ಮೇಲೆ ಮಾಡುವ ಸೂಚಿಯೊಂದನ್ನು ತಯಾರಿಸಬೇಕು. ಏಕೆಂದರೆ ಎಲ್ಲ ಕೆಲಸಗಳನ್ನು ಒಮ್ಮೆಲೇ ಮಾಡಲು ಸಾಧ್ಯವಿಲ್ಲವಷ್ಟೇ.

ಈಗ ಅಗತ್ಯಕ್ಕನುಗುಣವಾಗಿ, ಇಂದಿನ ಕೆಲಸಗಳನ್ನು ಇಂದೇ ಮುಗಿಸಿಬಿಟ್ಟರೆ ಮುಂದೆ ಯಾವ ಸಮಸ್ಯೆಯೂ ಉಳಿಯುವುದಿಲ್ಲ. ಮುಂದೆಂದೂ ನೀವು ಕೆಲಸವನ್ನು ಬಾಕಿ ಉಳಿಸಬೇಡಿ. ಇಂಥ ಮನೋವೃತ್ತಿ ಬೆಳೆಸಿಕೊಂಡರೆ, ನಿಮಗೆ ಕೆಲಸದ ಬಗ್ಗೆ ಯಾವುದೇ ಚಿಂತೆ ಇರುವುದಿಲ್ಲ.

ನಾಳೆ ಮಾಡಬೇಕಾದ ಕೆಲಸಗಳ ಸೂಚಿಯನ್ನು ಇಂದು ಸಂಜೆಯೇ ತಯಾರಿ
ಸಿಟ್ಟುಕೊಳ್ಳಿರಿ. ಆ ಬಳಿಕ ಒಂದೊಂದಾಗಿ ಕೆಲಸಗಳನ್ನು ಮುಗಿಸುತ್ತ ಹೋಗಬೇಕು
ಸೋಮಾರಿತನ ಮಾಡಿದರೆಂದರೆ ಮತ್ತೆ ಸಮಸ್ಯೆ ತಲೆದೋರುವುದು.

**ಕಷ್ಟದ ಕೆಲಸ ಮೊದಲು:–** ಸಾಮಾನ್ಯವಾಗಿ ಜನ ಸುಲಭದ ಕೆಲಸಗಳನ್ನು ಮೊದಲು ಮುಗಿಸಿ ಕಷ್ಟದ ಕೆಲಸವನ್ನು ಮುಂದೂಡುತ್ತಾರೆ. ಇದು ಸರಿಯಲ್ಲ. ಕಷ್ಟದ ಕೆಲಸವನ್ನೇ ಮೊದಲು ಎತ್ತಿಕೊಳ್ಳಬೇಕು. ಸಾಮಾನ್ಯ ಕೆಲಸ ಉಳಿದು ಕೊಂಡರೂ ಚಿಂತೆಗೆಡೆಯಿಲ್ಲ. ಆದರೆ ಜಟಿಲ ಕಾರ್ಯ ಉಳಿಯಿತೆಂದರೆ ನಿಮ್ಮ ಅಪ್ರ ಚೇತನ ಮನದ ಮೇಲೆ ಅದರ ಭಾರ ಯಾವಾಗಲೂ ಬಿದ್ದಿರುತ್ತದೆ. ದಿನದ ಆರಂಭ ದಲ್ಲೇ ಅದನ್ನು ಮುಗಿಸಿಬಿಟ್ಟರೆ, ಉಳಿದ ವೇಳೆ ಬೇರೆ ಕೆಲಸಮಾಡಲು ನಿಮ್ಮಲ್ಲಿ ತುಂಬಾ ಉತ್ಸಾಹ ತುಂಬಿರುತ್ತದೆ.

ನಿಮ್ಮ ತಲೆತಿನ್ನುವ ಸಮಸ್ಯೆಯ ಬಗ್ಗೆ ಗಂಭೀರವಾಗಿ ಯೋಚಿಸಿ ತೀರ್ಮಾ ಕೈಗೊಳ್ಳಬೇಕು. ಸರಿಯಾಗಿ ಗಮನ ಕೊಡದಿದ್ದರೇನೇ "ನಾಳೆಮಾಡೋಣ ಎಂಬ ಭಾವನೆ ಮೂಡುತ್ತದೆ. ವಾಸ್ತವವಾಗಿ ಅದು ಮೇಲ್ನೋಟಕ್ಕೆ ಕಾಣಿಸುವಷ್ಟು ಜಟಿಲ ಸಮಸ್ಯೆ ಆಗಿರುವುದಿಲ್ಲ. ನೀವದನ್ನು ಕೈಗೆತ್ತಿಕೊಂಡು ಮಾಡುತ್ತ ಹೋದರೆ ಓ....ಇಷ್ಟೇನೆ? ಎಂಬ ಉದ್ಗಾರ ನಿಮ್ಮ ಬಾಯಿಯಿಂದ ಹೊರಡಿಸುವಷ್ಟು ಸರಳ ಸಮಸ್ಯೆ ಆಗಿರುತ್ತದೆ ಅದು.

ನಾಳೆ ಮಾಡೋಣ ಎಂದು ಹೇಳಿದಾಕ್ಷಣ ಸಮಸ್ಯೆಗಳು ಓಡಿ ಹೋಗುವುದಿಲ್ಲ ಅವಿರುವುದೇ ಎದುರಿಸುವುದಕ್ಕಾಗಿ. ನಾವವನ್ನು ಎದುರಿಸಿಯೇ ನಿವಾರಿಸಬಹುದು ಸಮಸ್ಯೆಯನ್ನು ನಾವು ತೀಕ್ಷ್ಣ ದೃಷ್ಟಿಯಿಂದ ನೋಡಿದರೆ ಅದು ಚೂರು ಚೂರಾ ಹೋಗುತ್ತದೆ. ಇದರಿಂದ ನಮ್ಮ ಮೆದುಳಿಗೆ ಸ್ಫೂರ್ತಿ ದೊರೆತು, ಅದನ್ನೆದುರಿಸುವ ಶಕ್ತಿ ತಾನಾಗಿಯೇ ಉಂಟಾಗುತ್ತದೆ.

ಸಮಸ್ಯೆ ಬದುಕಿನ ಅಂಗವೆಂದೇ ನಾವು ಭಾವಿಸಬೇಕು. ಬದುಕು ನಡೆಸಲು ನಮಗೆ ಮಾನಸಿಕ ಹಾಗೂ ಶಾರೀರಿಕ ಈ ಎರಡೂ ರೀತಿಯ ಸಂಘರ್ಷ ಅಗತ್ಯ. ನಾ ಮಾಡೋಣ-ಎಂದು ಮುಂದೆ ಹಾಕುವ ಪ್ರಯತ್ನವೇ ಹುಡುಕಾಟ ಅದನ್ನೆದುರಿಸುವ ವಿವೇಕಿಗಳ ಲಕ್ಷಣ.

## ಕೆಲಸ ಹಾಗೂ ವಿಶ್ರಾಂತಿ ಪರಸ್ಪರ ಪೂರಕ

ಈ ಪ್ರವೃತ್ತಿಯಿಂದ ಪಾರಾಗಲು ನಾವು ಸ್ವಸ್ಥರೂ ಪ್ರಸನ್ನರೂ ಆಗಿರಬೇಕು ಅದಕ್ಕೆ ಕೆಲಸದ ಜತೆಗೇ ವಿಶ್ರಾಂತಿ ಏರ್ಪಾಡನ್ನೂ ಮಾಡಿಕೊಳ್ಳುವುದಗತ್ಯ ವಿಶ್ರಾಂತಿಯ ವೇಳೆ ನಮ್ಮ ಕೆಲಸದ ಶಕ್ತಿ ಮರಳಿ ದೇಹಕ್ಕೆ ದೊರಕುವುದು.

ಎಷ್ಟೋವೇಳೆ ಚಿಂತಾಧಿಕ್ಯದಿಂದಾಗಿ ವಿಶ್ರಾಂತಿಸಿಗುವುದೇ ಇಲ್ಲ. ಸ್ವಸ್ಥದೇಹ ದಲ್ಲಷ್ಟೇ ಸ್ವಸ್ಥಮೆದುಳು ಇರಬಹುದು. ಸ್ವಸ್ಥಮೆದುಳೇ ಸೂಕ್ತ ನಿರ್ಣಯ ಕೈಗೊಂ "ನಾಳೆಮಾಡೋಣ" ಎಂಬ ಚಟದಿಂದ ನಮಗೆ ಮುಕ್ತಿ ಕೊಡಿಸಬಲ್ಲದು.

ಇನ್ನಾದರೂ ನೀವು ನಾಳೆ ಮಾಡೋಣ ಎಂದು ಹೇಳದೆ ತಕ್ಷಣ ಮಾಡು ನಿರ್ಧಾರ ಕೈಗೊಳ್ಳಿರಿ.

# ಸೇವೆ

—ಡಾ॥ ಸಾ. ಶಿ. ಮರುಳಯ್ಯ, ನಿವೃತ್ತ ಕನ್ನಡ ಪ್ರಾಧ್ಯಾಪಕರು, ವಿಜಯನಗರ ೨ನೇಹಂತ,
ಬೆಂಗಳೂರು–೪೦

ಸೇವೆಯ ಪರಿಕಲ್ಪನೆ ತುಂಬಾ ವಿಚಿತ್ರವಾದದ್ದು. ಭಾರತೀಯರಲ್ಲಿ ವಿಶೇಷವಾಗಿ ಸೇವಕನ ಕೈಂಕರ್ಯ ಅಥವಾ ಭಕ್ತನು ಭಗವಂತನಿಗೆ ಸಮರ್ಪಿಸುವ ಭಕ್ತಿಪೂರ್ವಕ ಕಾಣಿಕೆ ಎಂದಷ್ಟೇ ಇತ್ತು. ಆದರೆ ಅದಕ್ಕೆ ಅನೇಕಾನೇಕ ಅರ್ಥಛ್ಛಾಯೆಗಳು ದೊರಕೊಂಡದ್ದು ಇಂಗ್ಲೀಷ್‌ನ SERVICE ಎಂಬ ಶಬ್ದದ ಸಾಹಚರ್ಯದಿಂದ. ಸರ್ವೀಸ್ ಎಂದರೆ ಸೇವೆ, ನೌಕರಿ, ಹಾಜರಿ, ಪ್ರಾರ್ಥನೆ, ಅರ್ಪಣೆ, ಪ್ರಯೋಗ, ಉಪಯೋಗ, ರೂಢಿ, ಪರಿಣತಿ ಎಂಬೆಲ್ಲ ಅರ್ಥಗಳಿವೆ. ಇತ್ತೀಚೆಗೆ, ಮುಖ್ಯವಾಗಿ ಟೆನ್ನಿಸ್, ವಾಲಿಬಾಲ್ ಮೊದಲಾದ ಆಟಗಳಲ್ಲಿ ಒಂದು ಕಡೆಯವರು ತಮ್ಮ ಎದುರಾಳಿಯ ಕಡೆಗೆ ಕಳುಹಿಸುವ ಪ್ರತಿಸಲದ ಮೊದಲ ಚೆಂಡನ್ನು ಸರ್ವೀಸ್ ಎಂದಂತೆ ಕನ್ನಡದಲ್ಲಿ ಈ ಪಕ್ಷದವರ ಆ ಪಕ್ಷದವರ ಸೇವೆ ಎಂಬ ರನ್ನಿಂಗ್ ಕಾಮೆಂಟರಿ ಕೂಡ ಕೇಳಿದ್ದೇನೆ. ಒಬ್ಬ ಡಾಕ್ಟರ್ ಹಣ ಪಡೆದು ಔಷಧಿ ಕೊಟ್ಟರೂ ಅವರದು ಸೇವೆ, ಒಂದು ಸಹಕಾರ ಸಂಘ ರೈತನಿಗೆ ಸಾಲಕೊಟ್ಟು ಬಡ್ಡಿ ಪಡೆದುಕೊಂಡರೂ ಅವರದು ಸೇವೆ, ಸೇತುಬಂಧನದ ಸಂದರ್ಭದಲ್ಲಿ ಅಳಿಲೊಂಡು ತನ್ನ ಬಾಲಕ್ಕಂಟಿದ ಮಳಳನ್ನು ವಾನರರ ಸೇತುವೆಯ ಮೇಲೆ ಒದರುತ್ತಿತ್ತು. ಅದೂ ಸೇವೆಯೇ, ಅದೂ ಅಳಿಲು ಸೇವೆ. ಅದೇ ರೀತಿ ದೇವದೇವನ ಕೃಪೆಗಾಗಿ ಭಕ್ತನು ಆಚರಿಸುವ ಉರುಳು ಸೇವೆ, ಕರ್ಪೂರ ಸೇವೆ, ಗುಗ್ಗುಳ ಸೇವೆ. ಇವುಗಳೂ ಸೇವೆ. ಇವು ದೇವರ ಸೇವೆ ದೇವರ ಮುಂದೆ ಸಂಗೀತಗಾರ್ತಿ ಹಾಡಿದರೆ ನರ್ತಕಿ ನರ್ತಿಸಿದರೆ ಅದೂ ಸೇವೆಯೇ. ಅದು ಕಲಾಸೇವೆ. ಆದರೆ ಇಂದು ಸೇವೆಯ ನೈಜ ಪ್ರಕ್ರಿಯೇ ನಮ್ಮ ನೆರವು. ಓರ್ವ ಆಂಗ್ಲ ಹೇಳುವಂತೆ :

> you act with your heart to help people in need.
> You act with your mind to find creative
> Solutions to problems which at first seemed
> Insurmountable. And you act with your hands
> *to* build dreams for those who have lost hope.

ಬಾಳಕಣದಲ್ಲಿ ಸೋತು ಸೊರಗಿದವರ ಮನಸ್ಸಿನಲ್ಲಿ ಸುಂದರಸ್ವಪ್ನಗಳನ್ನು ಕಟ್ಟಬೇಕು. ಅವರಲ್ಲಿ ಹಲವು ಆಶಾಕಿರಣಗಳನ್ನು ಮೂಡಿಸಬೇಕು. ಅದು

ನಿಜವಾದ ಸೇವೆ. ವೈಯಕ್ತಿಕತೆಯಿಂದ ದೂರವಾಗಿ ವೈಶಾಲ್ಯದೆಡೆಗೆ ಸಾಗುವುದೇ 'ಸೇವೆ' ಯ ನೈಜಾರ್ಥ.

ಅಂತೆಯೇ ಸೇವೆ, ಆಚರಿಸುವವನಲ್ಲಿ 'ಅಹಂ' ಮೂಡಿಸಬಾರದು, ಲೋಕೋದ್ಧಾರ ಮಾಡುತ್ತಿದ್ದೇನೆಂಬ ಭ್ರಮೆಯನ್ನು ಅವನಲ್ಲಿ ಹುಟ್ಟಿಸಬಹುದು. ಈ ಕುರಿತು ಶ್ರೀ ರಾಮಕೃಷ್ಣ ಪರಮಹಂಸರು ಕೇಶವಚಂದ್ರಸೇನನಿಗೆ ಹೇಳಿದ ಮಾತುಗಳು ಹೀಗಿವೆ.

"ದೇವರ ಸೇವೆ ಎಂದು ಲೋಕಸೇವೆ ಮಾಡು. ಲೋಕೋದ್ಧಾರ ನಿನ್ನಂಥ ಕೋಟಿ ಕೋಟಿ ಜನರು ಜನ್ಮವೆತ್ತಿ ಬಂದರೂ ಆಗದು, ಸ್ಪ್ರಿಂಕ್ಲರ್‌ನಲ್ಲಿ ಪರಿಮಿತಿ ಪ್ರದೇಶ ನೆನೆಸಬಹುದು; ಭೂಮಂಡಲವನ್ನೆಲ್ಲಾ ಅಲ್ಲ. ಅದು ಮಳೆ ಬಂದಾಗ ಮಾತ್ರ ಸಾಧ್ಯ'

ಆದ್ದರಿಂದ ಸೇವೆ ಧನ್ಯತೆಯನ್ನು ದೃಢೀಕರಿಸುತ್ತದೆ. ಆತ್ಮಸಾಂತ್ವನ ಅಥವ ಆತ್ಮತೃಪ್ತಿಯನ್ನು ದೊರಕಿಸಿಕೊಡುತ್ತದೆ

ಸೇವೆಯ ಮತ್ತೊಂದು ಮಗ್ಗುಲು ಹೀಗಿದೆ. ಅನ್ಯರಿಗೆ ಉಪಕಾರ ಮಾಡುತ್ತೇನೆಂದು ಅವರಿಗೆ ಹಿಂಸೆಯಾಗುವಂತೆ ವರ್ತಿಸಬಾರದು. ಆದು ಸೇವೆಯ ಸೌಜನ್ಯವಲ್ಲ. ಉದಾಹರಣೆಗೆ, ಒಬ್ಬ ಆಯಾಸದಿಂದ ಬಳಲಿ ಒಂದು ಮರದ ನೆರಳಿನಲ್ಲಿ ಮಲಗಿ ನಿದ್ರೆಹೋಗುತ್ತಿದ್ದಾನೆಂದು ಇಟ್ಟುಕೊಳ್ಳೋಣ. ಅವನ ಆ ವಿಶ್ರಾಂತಿಯನ್ನು ಕಲಕಿ, ಮೇಲೆಬ್ಬಿಸಿ 'ನೆಲದ ಮೇಲೇಕೆ ಮಲಗಿದ್ದೀಯೆ, ಹಾಸಿಗೆ ಹುಡುಕಿಕೊ' ಎನ್ನುವುದು ಸಜ್ಜನಿಕೆಯೆ? ಆ ವರ್ತನೆ ಸೇವೆಯ ಕಕ್ಷೆಯಿಂದ ಬಹುದೂರ ಉಳಿಯುತ್ತದೆ. ಆದನ್ನೇ ಉದಾಹರಿಸಿ ಡಿ. ವಿ. ಜಿ. ಹೀಗೆ ಹೇಳುತ್ತಾರೆ.

ಬಳಲಿ ನೆಲದಲಿ ಮಲಗಿ ಮೈಮರೆತು ನಿದ್ರಿಪನ
ಕುಲಕಿ ಹಾಸಿಗೆಯನಸೆನುವುದುಪ್ರಕೃತಿಯೆ?
ಒಳಿತನೆಸುಗುವೆನೆಂದು ನೆಮ್ಮದಿಯ ನುಂಗದಿರು
ಸುಲಭವಲ್ಲೊಳಿತೆಸಗೆ–ಮಂಕುತಿಮ್ಮ.

ಆದ್ದರಿಂದ ಸಕಲ ಜೀವಾತ್ಮರಿಗೆ ಲೇಸನೇ ಬಯಸುವುದು ಸೇವೆ, ಲೇಸನೇಗೈಯುವುದು ಸೇವೆ. ಅಂತಯೇ,

ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು
ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ
ಬೆಲ್ಲ ಸಕ್ಕರೆಯಾಗು ದೀನ ದುರ್ಬಲರಿಂಗೆ
ಎಲ್ಲರೊಳಗೊಂದಾಗು-ಮಂಕುತಿಮ್ಮ

ಈ ಅಮೃತೋಪಮ ವಾಣಿಯೇ ನೈಜ ಸಹಜ ಸೇವೆ!

(ವೀರಶ್ರೀ ಕೃಪೆಯಿಂದ)

# ಭ್ರೂ ಣ ಹ ತ್ಯೆ

–ಜಿ. ಶಾರದ ರಾಜಶೇಖರ್, 847, 4ನೇ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು-40.

ಹೆಣ್ಣು ಮಕ್ಕಳು ನಮ್ಮ ಸಮಾಜದಲ್ಲಿ ಮೊದಲಿನಿಂದಲೂ ಗೌರವ ಸ್ಥಾನವನ್ನು ಪಡೆದಿದ್ದರು. 'ನಸ್ತ್ರೀ ಸ್ವಾತಂತ್ರ ಮರ್ಹತಿ' ಎಂದ ಮನು ಸಹ "ಯತ್ರ ನಾರ್ಯಸ್ತು ಪೂಜ್ಯಂತ ತತ್ರ ರಮಂತೆ ದೇವತಾಃ" ಎಂದು ಹೇಳಿ ಎಲ್ಲಿ ನಾರಿಯರನ್ನು ಗೌರವ ಯುತವಾಗಿ ಕಾಣುವರೊ ಅಲ್ಲಿ ದೇವತೆಗಳು ವಾಸಿಸುತ್ತಾರೆ ಎಂದು ಹೇಳಿದ್ದಾನೆ, ಆದರೆ ಕಾಲಕ್ರಮೇಣ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಹೆಣ್ಣನ್ನು ಕೀಳು ದೃಷ್ಟಿಯಿಂದ ಕಾಣುವ ಪರಿಪಾಠ ಬೆಳೆಯತೊಡಗಿತ್ತು. ಈ ಭಾವನೆಯನ್ನು ತೊಡೆದು ಹಾಕಲು ಅನೇಕ ಮಹಾಪುರುಷರು ಶ್ರಮಿಸಿದ್ದಾರೆ

ಹೆಣ್ಣು ಹೆಣ್ಣಲ್ಲ ಹೆಣ್ಣು ರಕ್ಕಸಿಯಲ್ಲ
ಹೆಣ್ಣು ಸಾಕ್ಷಾತ್ ಕಪಿಲ ಸಿದ್ಧ ಮಲ್ಲಿಕಾರ್ಜುನ

ಎಂದರು ಶರಣರು. ಬಸವಣ್ಣನವರು ಹೆಣ್ಣಿಗೆ ಸಮಾನ ಸ್ಥಾನವನ್ನು ನೀಡಿ ಮೋಕ್ಷಕ್ಕೆ ಹೆಣ್ಣು ಅರ್ಹಳು ಎಂದು ತಿಳಿಸಿ ಅವಳಿಗೂ ಲಿಂಗ ದೀಕ್ಷೆಯನ್ನು ಕೊಟ್ಟರು. ಭಗವಾನ್ ಬುದ್ಧ, ಮಹಾವೀರರು ಸಹ ಹೆಣ್ಣಿಗೆ ಗೌರವ ಸ್ಥಾನವನ್ನು ನೀಡಿದುದರ ಪರಿಣಾಮವಾಗಿ ಅನೇಕ ಭಿಕ್ಷುಣಿಯರು, ಜೈನ ಸಂಪ್ರದಾಯದಲ್ಲಿ ಅನೇಕ ಸನ್ಯಾಸಿ ನಿಯರು, ಆಗಿ ಹೋದರು.

ಕ್ರೈಸ್ತರ ಗುರುವಾದ ಜೀಸಸ್ ಸಹ ಮಹಿಳೆಯರಿಗೆ ಗೌರವ ಸ್ಥಾನವನ್ನು ನೀಡಿದುದರ ಫಲವಾಗಿ ಈಗಲೂ ಸಹ ಕ್ರೈಸ್ತಮತದಲ್ಲಿ ಅನೇಕ ಸನ್ಯಾಸಿನಿಯರನ್ನು ಕಾಣಬಹುದಾಗಿದೆ.

ಆದರೂ ಸಹ ಹೆಣ್ಣು ಎಲ್ಲ ರಂಗಗಳಲ್ಲೂ ಪುರುಷರ ಸಮಸಮಕ್ಕೂ ದುಡಿದು ಮುಂದುವರಿಯುತ್ತಿದ್ದರೂ ಸಹ, ಹೆಣ್ಣು ಪುರುಷನ ಸರಿಸಾಟಿ ಎಂದು ಸಮಾಜ ಒಪ್ಪಿಕೊಳ್ಳುತ್ತಿಲ್ಲವೇಕೆ ಎಂಬ ಬೃಹದಾಕಾರವಾದ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿದಿದೆ. ಹೆಣ್ಣು ಮಗು ಹುಟ್ಟಿತೆಂದೊಡನೆ ಬೆಚ್ಚಿಬೀಳುವ ಮಾತಾಪಿತೃಗಳೂ ಇಲ್ಲದಿಲ್ಲ. ಇದಕ್ಕೆಲ್ಲ ಮೂಲಕಾರಣವೆಂದರೆ ವರದಕ್ಷಿಣೆ ಪಿಡುಗು ನಮ್ಮ ಸಮಾಜದಲ್ಲಿ ಬೃಹ-ದಾಕಾರವಾಗಿ ಹಬ್ಬಿದೆ. ಅದ್ದೂರಿ ಮದುವೆಗಳು, ವಧುದಹನ ವರದಕ್ಷಿಣೆಗಾಗಿ, ಈ ಎಲ್ಲಾ ಸಮಸ್ಯೆಗಳು ಇರುವವರೆಗೆ ಸಮಾಜದಲ್ಲಿ ಹೆಣ್ಣು ಮಗು ಬೇಡವೆಂದೆ ಬಯಸುತ್ತಾರೆ. ಇದರ ಪರಿಣಾಮವೆ "ಭ್ರೂಣಹತ್ಯೆ". ಹೆಣ್ಣು ಎಂದು ಅರಿತೊಡನೆ ಭ್ರೂಣದಲ್ಲೆ ಅದರ ಹತ್ಯೆಯನ್ನು ಮಾಡುತ್ತಾರೆ ತಾಯಂದಿರು. ಇದು ಸರಿಯೆ ?

ತಪ್ಪೆ? ಎನ್ನುವ ಪ್ರಶ್ನೆ ಬುದ್ಧಿಜೀವಿಗಳನ್ನು ಕಾಡುತ್ತಿದೆ. ಸಮಾಜದಲ್ಲಿ ಹೆಣ್ಣಿನ ಶೋಷಣೆ ತಪ್ಪುವವರೆಗೂ ಈ ಭ್ರೂಣಹತ್ಯೆ ನಡೆಯುತ್ತಲೇ ಇರುತ್ತದೆ ಎಂದರೆ ಉತ್ಪ್ರೇಕ್ಷೆ. ಹೆಣ್ಣೇ ಹೆಣ್ಣಿಗೆ ಶತ್ರುವೇ ಎಂದು ಮೂದಲಿಸಬಹುದು. ಆದರೆ ಸಮಾಜದಲ್ಲಿ ತುಂಬಿರುವ ಅನೇಕ ದುಷ್ಟ ಪದ್ಧತಿಗಳು ತೊಲಗಬೇಕು. ಇದಕ್ಕಾಗಿ ಬೃಹತ್ತಾದ ಚಳುವಳಿ ನಡೆಯಬೇಕು "ಸತಿಸಹಗಮನ" ದಂತಹ ದುಷ್ಟ ಪದ್ಧತಿಯನ್ನು ತೊಲಗಿಸಲು ರಾಜರಾಂ ಮೋಹನರಾಯ್‌ರಂತಹ ಹೆಣ್ಣಿನ ಬಗ್ಗೆ ಅನುಕಂಪ ದೃಷ್ಟಿಯುಳ್ಳ ಮಹಾನ್ ವ್ಯಕ್ತಿಗಳು ಶ್ರಮಿಸಬೇಕು. ಕಣ್ಣಿದ್ದು ಕುರುಡರಂತೆ ವರ್ತಿಸುತ್ತಿರುವ ನಾವುಗಳು ಆತ್ಮ ಶೋಧನೆಯನ್ನು ಮಾಡಿಕೊಳ್ಳಬೇಕು. ಸಮಾಜ, ಸರ್ಕಾರ ಎರಡೂ ಸಹ ಸೇರಿ ಭ್ರೂಣಹತ್ಯೆಯನ್ನು ನಿಲ್ಲಿಸುವಂತಾಗಬೇಕು. ಅರಿಯದ ಮಾತೆಯವರಿಗೆ ತಿಳುವಳಿಕೆ ನೀಡಬೇಕು. ಭ್ರೂಣಹತ್ಯೆ ಮಹಾಪಾಪ ಎಂಬ ಪರಿಜ್ಞಾನವನ್ನು ಮಾತೆ-ಯವರಿಗೆ ಮಾಡಿಕೊಡಬೇಕು. ಪ್ರಕೃತಿಯಲ್ಲಿ ಜೀವ ಮುಂದುವರಿಯಲಿಕ್ಕೆ ಪುರುಷನಷ್ಟೇ ಸ್ತ್ರೀಯು ಸಹ ಬಾಧ್ಯಳು. ಸಮಾಜದ ಕೆಟ್ಟ ರೂಢಿಗಳನ್ನು ಕಂಕಣ ಬದ್ಧರಾಗಿ ಹೋಗಲಾಡಿಸುವ ಜೊತೆ ಜೊತೆಗೆ ಭ್ರೂಣ ಹತ್ಯೆಯನ್ನು ನಿಲ್ಲಿಸಬೇಕು.

ಹೆಣ್ಣು ಕಂದ ಪ್ರಪಂಚಕ್ಕೆ ಬರುವ ಮೊದಲೆ ಚಿವುಟಿ ಹಾಕುವುದು ಯಾವನ್ಯಾಯ? ಅವಳು ಪ್ರಪಂಚಕ್ಕೆ ಬರಲಿ, ಪ್ರಪಂಚದ ಆಗು ಹೋಗುಗಳಲ್ಲಿ ಭಾಗಿಯಾಗಲಿ, ಹೆಣ್ಣಿದ್ದ ಮನೆ ಚಂದ, ಅವಳು ಮನೆಗೆ ಲಕ್ಷ್ಮಿ ಇದ್ದಂತೆ.

ಹೆಣ್ಣು ಹೆಣ್ಣೆಂದೇಕೆ ಬೀಳುಗೆಳವಿರೇಕೊ
ಕಣ್ಣು ಕಾಣದ ಗಾವಿಲರು
ಕುವರನಾದೊಡೆ ಬಂದ ಗುಣವೇನದರಿಂದ
ಕುವರಿಯಾದೊಡೆ ಕುಂದೇನು
ಇವರೀರ್ವರೊಳಗೆ ಏಳ್ಗೆ ಪಡೆದವರಿಂದ
ಸವೆನಿಪುದು ಇಹಪರ ಸೌಖ್ಯ

ಎಂಬ ಸಂಚಿ ಹೊನ್ನಮ್ಮನ ಈ ಕವಿತೆ ಎಷ್ಟೊಂದು ಸಮಂಜಸ.

ಕರುಣೆ, ದಯೆ, ಅನುಕಂಪಗಳಿಂದ ತುಂಬಿ ತುಳುಕುವ ಹೆಣ್ಣಿನಿಂದಲೇ ಈ ಪ್ರಪಂಚ ಸಹಸ್ರ ಸಹಸ್ರಾರು ಮನುಜಕುಲವನ್ನು ಈ ಪ್ರಪಂಚಕ್ಕೆ ತಂದಿದೆ. ಈ ಹೆಣ್ಣೇ ಇಲ್ಲದಿದ್ದರೆ ಪ್ರಪಂಚವೇ ನಾಶವಾದೀತು.

ಆದ್ದರಿಂದ ಹೆಣ್ಣಿನ ಭ್ರೂಣಹತ್ಯೆ ಮಾಡದೆ ಅವಳು ಪ್ರಪಂಚಕ್ಕೆ ಬರಲು ಬಿಡಿ. ಅವಳ ಕೊಡುಗೆಯೂ ಸಹ ಪ್ರಪಂಚಕ್ಕೆ ಬೇಕು. ಮಾತೆಯ ಕರುಣೆಯಿಂದಲ್ಲವೇ ಮಕ್ಕಳು ಬೆಳೆಯುವುದು.



# ಲಂಘನಕ್ರಮ ಮತ್ತು ಪ್ರಯೋಜನ

–ಪ್ರೊ॥ ಎಂ. ಮಹಾದೇವಶಾಸ್ತ್ರೀ, ನಂ. 4, ಗಾಂಧಿಬಜಾರ್, ಬೆಂಗಳೂರು–4.

ಲಂಘನವೆಂದರೆ ಶರೀರದ ಆರೋಗ್ಯವನ್ನು ಸುಧಾರಿಸುವುದಕ್ಕೋಸ್ಕರ ನಿಯಮಿತವಾಗಿ ಉಪವಾಸಮಾಡುವ ಚಿಕಿತ್ಸಾಕ್ರಮ. ಕೆಲವು ರೋಗಗಳನ್ನು ಹೋಗಲಾಡಿಸುವುದಕ್ಕೂ ಮೈಯಲ್ಲಿ ಮೇದಸ್ಸು ವಿಶೇಷವಾಗಿ ಸೇರಿ ತೂಕ ಹೆಚ್ಚಾಗಿರುವುದನ್ನು ಸಂಪಡಿಸುವುದಕ್ಕೂ ಕೆಲವು ನಿಯಮಗಳನ್ನನುಸರಿಸಿ ಉಪವಾಸ ಕ್ರಮವನ್ನು ಕೈಗೊಳ್ಳಬೇಕಾಗುತ್ತದೆ.

ಹಸಿವು ಚೆನ್ನಾಗಿದ್ದು ಆಹಾರ ಪ್ರಮಾಣವು ಸಕಾಲಕ್ಕೆ ಜೀರ್ಣವಾಗಿ ಮಲ–ಮೂತ್ರಾದಿಗಳು ವಿಸರ್ಜನೆಯಾಗಿ ಶರೀರದ ಕಾರ್ಯಗಳು ಸಮರ್ಥವಾಗಿ ನಡೆಯುತ್ತಾ ಇಂದ್ರಿಯ ಪಾಟವ ಮತ್ತು ಮನಸ್ಸು ನಿರ್ಮಲವಾಗಿರುವುದಕ್ಕೆ ಆರೋಗ್ಯವೆಂದು ಹೆಸರು. ಇವುಗಳಲ್ಲಿ ಯಾವುದೊಂದು ಹೆಚ್ಚು ಕಡಿಮೆಯಾದರೂ ಅನಾರೋಗ್ಯವೆನಿಸುವುದು. ಆಹಾರ, ನಿದ್ರೆ ಮತ್ತು ಬ್ರಹ್ಮಚರ್ಯಗಳನ್ನು ಯುಕ್ತಿಯಿಂದ ಉಪಯೋಗಿಸುವವರಿಗೆ ರೋಗ ಬಾಧೆಗಳಿರುವುದಿಲ್ಲ.

ಅಧಿಕ ಭೋಜನ, ಅಲ್ಪ ಭೋಜನಗಳು ರೋಗಗಳಿಗೆ ಕಾರಣಗಳು. ಅಧಿಕ ಭೋಜನದಿಂದ ಅಜೀರ್ಣ, ಭೇದಿ ಮುಂತಾದ ತೊಂದರೆಗಳು ಸಂಭವಿಸುವುದುಂಟು. ಅಲ್ಪ ಭೋಜನದಿಂದ ಅಲ್ಪ ಶಕ್ತಿ ಅಲ್ಪೋತ್ಸಾಹಗಳುಂಟಾಗುವುವು. ಇವನ್ನು ಹೋಗಲಾಡಿಸಿ ಬಲ, ಉತ್ಸಾಹಗಳು ಸ್ಥಿರವಾಗಿರುವ ರೀತಿಗೆ ಲಂಘನ ಮತ್ತು ಬೃಂಹಣಗಳೆಂಬ ಎರಡು ಬಗೆ ಚಿಕಿತ್ಸೋಪಾಯಗಳಿವೆ. ಇವು ಪರಸ್ಪರ ವಿಪರೀತ ಕ್ರಮಗಳು.

ಶರೀರವು ವಯಸ್ಸಿಗೆ ಮತ್ತು ಎತ್ತರಕ್ಕೆ ಅನುರೂಪವಾಗಿಲ್ಲದೆ ಮಿತಿಮೀರಿದ್ದರೆ ಸ್ಥೌಲ್ಯವೆನಿಸುವುದು. ಇದರಿಂದ ಕೆಲಸದಲ್ಲಿ ನಿರುತ್ಸಾಹ, ಏಳುವುದಕ್ಕೂ ಕೂತುಕೊಳ್ಳುವುದಕ್ಕೂ ಮಾಂಸ ಖಂಡಗಳಲ್ಲಿ ಬಿಗಿ, ನೋವು, ಆಯಾಸ, ಸೋಮಾರಿತನ, ಯಾವಾಗಲೂ ಸುಖಾಸನ, ಅಥವಾ ಸುಪ್ಪತ್ತಿಗೆಯಲ್ಲೇ ಇರುವುದು ಮೈಬೆವರಿನ ವಾಸನೆ, ಸ್ವಲ್ಪ ಕೆಲಸ ಮಾಡುತ್ತಲೇ ಆಯಾಸ, ಮೇಲುಬ್ಬುಸಗಳು, ತೋರುತ್ತವೆ. ಮೈಸ್ಥೂಲವಾಗಿರುವುದರಿಂದ ಮುಂದೆ ಸಿಹಿ ಮೂತ್ರ, ಭಗಂದರ (fistule in ano) ಕೆಮ್ಮು ಮೂರ್ಛೆ apoplexy ರಕ್ತ ಸಂಪೀಡನ–ಮೂತ್ರ ಕೃಚ್ಛ (dyouria) ರಕ್ತದ ಪೀಡನ high blocd pressure ಕಷ್ಟಕರ ಚರ್ಮವ್ಯಾಧಿಗಳು ಆಗಬಹುದು. ಇವು ಯಾವುವೂ ಸಂಭವಿಸಿದಂತೆ ಮೊದಲಲ್ಲೇ ಲಂಘನವನ್ನು ಅಭ್ಯಸಿಸುವುದರಿಂದ ಮನುಷ್ಯನು ನೆಮ್ಮದಿಯಾಗಿರಬಹುದು. ಈ ವ್ಯಾಧಿಗಳು ಕೂಡ ಮೂಲವಾಗಿ ಸಿಂತಾಗ

ವಾಸಿಯಾಗುವುದಿಲ್ಲ. ಈ ಸ್ಥಿತಿಯಲ್ಲಿ ಕೇವಲ ಪಥ್ಯಾಭ್ಯಾಸಗಳಿಂದಲೇ ಕಡೆಯುವರೆಗೂ ಇರಬೇಕಾಗುವುದು. ಹೀಗಾಗುವುದಕ್ಕೆ ಬಿಡದೆ ಆ ಮುನ್ನೆಚ್ಚರಿಕೆಯನ್ನು ವಹಿಸುವುದೇ ಒಳ್ಳೆಯದು. "ಕಾರ್ಶ್ಯಮೇವವರಂ ಸ್ಥೌಲ್ಯಾತ್ ನಹಿ ಸ್ಥೂಲಸ್ಯ ಭೇಷಜಮ್"? ಎಂದು ಆಯುರ್ವೇದೋಕ್ತಿ. ಈ ಕಾರಣದಿಂದ ಸ್ಥೂಲರಾಗಿರುವುದಕ್ಕಿಂತ ಕೃಶರಾಗಿರುವುದೇ ಮೇಲು. ಸ್ಥೂಲರಿಗೆ ಔಷಧವೇ ಇಲ್ಲ. ನೂರೈವತ್ತು ಸೆಂಟಿಮೀಟರ್ ಎತ್ತರದ ಇಪ್ಪತ್ತು ವರ್ಷದ ಮನುಷ್ಯನೂ ಸರಾಸರಿ 50 ಕಿಲೋಗ್ರಾಂ ತೂಕವಿರುತ್ತಾನೆ. 185 ಸೆಂಟಿಮೀಟರ್ ಎತ್ತರದ 45 ವರ್ಷದ ಮನುಷ್ಯನೂ 80 ಕಿ.ಗ್ರಾಂ. ತೂಕವಿರುತ್ತಾನೆ. ಸಾಮಾನ್ಯವಾಗಿ ಹೆಂಗಸಿನ ತೂಕ ಗಂಡಸಿಗಿಂತಲೂ ಅರ್ಧದಿಂದ 1 ಕಿ.ಗ್ರಾಂ. ಕಡಿಮೆಯಾಗಿರುವುದು. ಗರ್ಭಿಣಿಯರು ಹೆಚ್ಚು ತೂಕವಿರುವರು.

ಪ್ರತಿದಿನ ಕ್ರಮವಾಗಿ ವ್ಯಾಯಾಮ ಸ್ನಾನಾದಿಗಳನ್ನು ಮುಗಿಸಿ ಪುಷ್ಟಿಕರ ಆಹಾರವನ್ನು ಸೇವಿಸುವರ ಮೂಳೆ ಮಾಂಸ ಖಂಡಗಳು ಚೆನ್ನಾಗಿ ಬೆಳೆದು ದಪ್ಪ ಕಾಣುವರು. ಇಂತಹವರಿಗೆ ಲಂಘನವನ್ನು ಮಾಡಿಸಬಾರದು. ವ್ಯಾಯಾಮದಿಂದ ಇಂತಹವರು ಆರೋಗ್ಯವಾಗಿರುವರು. ಇವರ ಮೈ ಹಗುರ ವೆನಿಸಿದಂತಿರುವುದರಿಂದ ಹೆಚ್ಚು ಉತ್ಸಾಹದಿಂದ ಕೆಲಸ ಮಾಡಬಲ್ಲರು.

ವಯಸ್ಸಿಗೆ ತಕ್ಕಕಷ್ಟಕ್ಕಿಂತಲೂ ಮೀರಿದ ತೂಕವಿರುವರಲ್ಲಿ ವಿಶೇಷವಾಗಿ ಮೇದಸ್ಸು ಸೇರಿ ಶರೀರ ದಪ್ಪಕಾಣುವುದು. ಇಂತಹ ಮೇದಸ್ಸು ಸ್ತನ, ಉದರ ಮತ್ತು ಪಿರ್ರೆಗಳಲ್ಲಿ ಸೇರಿರುವುದು. ಇದನ್ನು ಕಡಿಮೆ ಮಾಡುವ ಉಪಾಯಗಳು ಎರಡು. 1 ಕಡಿಮೆ ಊಟ. 2 ಹೆಚ್ಚು ಕೆಲಸ. ಊಟವನ್ನೇ ಪ್ರಧಾನವಾಗಿಟ್ಟು ಅಧಿಕ ತಿನ್ನುವುದು ಒಂದು ದುಶ್ಚಟ. ಇದನ್ನು ಬಿಟ್ಟು ಮನಸ್ಸುಮಾಡಿ ಸ್ವಲ್ಪ ಸ್ವಲ್ಪ ಕಡಿಮೆ ಪ್ರಮಾಣದಲ್ಲಿ ಎಂದರೆ ಬಲ ತಗ್ಗದಂತೆ ಪುಷ್ಟಿಕರ ಆಹಾರವನ್ನು ಸೇವಿಸುತ್ತಲಿದ್ದರೆ ಅಷ್ಟರಿಂದಲೇ ತೃಪ್ತಿಯಾಗುವುದು. ಸಿಹಿ, ತುಪ್ಪ, ಕೊಬ್ಬು, ಮಾಂಸಗಳನ್ನು ಕಡಿಮೆಯಾಗಿಯೇ ಉಪಯೋಗಿಸಬೇಕು. 2ನೆದಾಗಿ ಶ್ರಮವಹಿಸಿ ಹೆಚ್ಚು ಕೆಲಸಮಾಡುವುದು ಇದರಿಂದ ಮೇದಸ್ಸು ಕಡಿಮೆಯಾಗಿ ಶರೀರದ ತೂಕ ಸರಿಯಾದ ಮಟ್ಟದಲ್ಲಿರುತ್ತದೆ. ತೂಕ ಕಡಿಮೆಯಾಗಬೇಕೆಂದು ಆತುರಪಟ್ಟು ಅಥವಾ ಹೆಚ್ಚು ಕಲಸ ಮಾಡಿದರೆ ದೌರ್ಬಲ್ಯವುಂಟಾಗುವುದು, ಸ್ವಲ್ಪ ಮೇದಸ್ಸು ತಗ್ಗಿದಂತಿರುವುದು. ಪುನಃ ಹಿಂದಿನಂತೆ ಆಹಾರಾದಿಗಳನ್ನು ಸೇವಿಸುತ್ತಿದ್ದರೆ, ಮೊದಲಿನಂತೆಯೆ ಸ್ಥೌಲ್ಯ ಕಾಣಿಸಿಕೊಳ್ಳುವುದು. ಇದಕ್ಕೆ ಬದಲಾಗಿ ಸ್ವಲ್ಪ ಕಡಿಮೆಯಾಗಿ ಊಟ ಮತ್ತು ಸಾಧಾರಣ ದಿನಚರಿಯ ಕೆಲಸಗಳನ್ನು ಅನುಸರಿಸುತ್ತಿದ್ದರೆ ಇದೇ ಅಭ್ಯಾಸವಾಗಿ ಮೇದಸ್ಸು ತಗ್ಗಿ ನೆಮ್ಮದಿಯುಂಟಾಗುವುದು.

ಲಂಘನವು ಸರಿಯಾಗಿ ಆಗುವುದರಿಂದ ಆ ಮನುಷ್ಯನ ಕಿವಿ, ಚರ್ಮ, ಕಣ್ಣು, ನಾಲಿಗೆ, ಮತ್ತು ಮೂಗುಗಳಾದ ಪಂಚ ಜ್ಞಾನೇಂದ್ರಿಯಗಳು ಕನ್ಮ ವಿಷಯಗಳಾದ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳನ್ನು ಗ್ರಹಿಸುವ ಸಾಮರ್ಥ್ಯವನ್ನು ಪಡೆಯುವುವು. ವಾಕ ಮೂತ್ರ, ಪೂರೀಷಾದಿ ಮಲಗಳು ಆಯಾ ಕಾಲಕ್ಕೆ ವಿಸರ್ಜಿತ ವಾಗುವುವು. ಹಸಿವು ಬಾಯಾರಿಕೆ ಜೊತೆಯಾಗಿ ತೋರುವುವು. ಹೃದಯ, ತೇಗು, ಗಂಟಲು ಇವು ಶುದ್ಧವಾಗಿರುವುವು. ರೋಗದ ವೇಗ ಕಡಿಮೆಯಾಗುವುದು, ತೂಗಟಿಕೆ ಹೋಗಿ ಉತ್ಸಾಹ ಹೆಚ್ಚುವುದು.

ಈಗಿನ ನಾಗರಿಕತೆಯಲ್ಲಿ ಜನರ ಸೌಕರ್ಯಗಳು, ಆಗಾಗ್ಗೆ ಹೊರಗಿನ ಉಪ-ಹಾರಗಳು, ಮಾರಾಟದಲ್ಲಿ ದೊರೆಯುವ ಸಿದ್ಧ ತಿಂಡಿ ತೀರ್ಥಗಳು ಹೆಚ್ಚಾಗಿ ಜನರ ಶ್ರಮ ಕಡಿಮೆಯಾಗುತ್ತಿದೆ. ಇವುಗಳಿಂದ ಶರೀರದಲ್ಲಿ ಪುಷ್ಟಿಹೆಚ್ಚಾಗಿ ಮೇದೋವೃದ್ಧಿ ಯಾಗುತ್ತದೆ. ಬಲಕಡಿಮೆಯಾದಾಗ ವಿವಿಧ ರೋಗಗಳು ತಲೆಹಾಕುವುವು.

ವಾಹನ ಸೌಕರ್ಯ, ನೀರಿನ ಪಂಪು, ಮಿಕ್ಸರ್, ರುಬ್ಬುವಯಂತ್ರ ಮುಂತಾದವು ಶ್ರಮವನ್ನು ತಪ್ಪಿಸುವುದಕ್ಕೆ ಅನುಕೂಲ. ಆದರೆ ಶ್ರಮಯಾಗದಂತೆ ಆಹಾರ ಪ್ರಮಾಣವೂ ಕಡಿಮೆಯಾಗತಕ್ಕದ್ದವಶ್ಯಕ. ಅಲ್ಲದೆ 50 ವರ್ಷಕ್ಕೆ ಕಡಿಮೆಯಾಗಿ ರುವರು ಪ್ರತಿದಿನ ಸ್ವಲ್ಪಮಟ್ಟಿಗೆ ವ್ಯಾಯಾಮವನ್ನು ಮಾಡಬೇಕು. 50ಕ್ಕೆ ಮೇಲ್ಪಟ್ಟವರು ಬೆಳಿಗ್ಗೆ ಅಥವ ಸಂಜೆ ಒಂದು ಮೈಲಿ ದೂರದಷ್ಟಾದರೂ ಶುದ್ಧಗಾಳಿಯಲ್ಲಿ ನಿಧಾನವಾಗಿ ನಡೆಯಬೇಕು. ಇದರಿಂದ ಅಗ್ನಿದೀಪ್ತಿಯುಂಟಾಗಿ ಮೇದಸ್ಸು ಜೀರ್ಣಿಸುವುದು. ಶುದ್ಧಗಾಳಿಯನ್ನು ಸೇವಿಸುವುದರಿಂದ ಎಲ್ಲಾ ರೀತಿಗಳಲ್ಲೂ ಆರೋಗ್ಯ ಉತ್ತಮವಾಗುವುದು.

---

## ಸುಭಾಷಿತ

ಉತ್ತಮರಿಗೆ ದಾನವನ್ನು ಮಾಡದೆ ಅಪಾತ್ರರಿಗೆ ಮಾಡಿದಲ್ಲಿ ಕಷ್ಟಪಟ್ಟುಗಳಿಸಿದ ಹಣ ವ್ಯರ್ಥವಾದಂತೆ.
ವಿದುರ ನೀತಿ.

ವಿನಾಕಾರಣ ವೈರತ್ವ ಕಟ್ಟಿಕೊಳ್ಳುವದಾಗಲಿ, ವ್ಯರ್ಥವಾದದಲ್ಲಿ ತೊಡಗುವುದಾಗಲಿ ಎಂದೂಮಾಡಬಾರದು, ಏಕೆಂದರೆ ಅದರಿಂದ ಲಾಭವೇನು ಇಲ್ಲಿ. ಆದರೆ ಅದರಿಂದಾಗುವ ಅನರ್ಥ ತಪ್ಪಿದ್ದಲ್ಲ
ಸುಭಾಷಿತಾವಲಿ.

ಶಾಂತಿ ಎಂಬುದು ಪರ್ವತಗಳನ್ನು ಪರಿವರ್ತಿಸುವುದರಿಂದ ಸಿಕ್ಕುವುದಿಲ್ಲ ಮನುಷ್ಯನನ್ನು ಪರಿವರ್ತಿಸುವುದರಿಂದ ಸಿಗುತ್ತದೆ.
ಪ್ರಿಫಿತ್

ಸಾವುದು ದಿಟ ದಿಟ ನೋಡಾ. ಅದು ಸಟಿ ಎಂದು, ನಿತ್ಯವೆಂದ ನಿತ್ಯವನಂಬಿ, ಹೊನ್ನು ಹೆಣ್ಣು ಮಣ್ಣು ನಿನ್ನವೆಂದು ನಂಬಿರಲು, ಅದು ನಿನ್ನ ವಂಚಿಸಿ ಅನ್ಯರಿಗೆ ಹೋದುದನರಿಯಿರೆ? ಅಯ್ಯೋ ಅಯ್ಯೋ ಕೆಡದಿರಿ. ಸತ್ಪಾತ್ರಕ್ಕೆ ಸಲಿಸಿ ಬದುಕಿರಯ್ಯಾ. ಗುರು ಲಿಂಗ ಜಂಗಮಕ್ಕೆ ಸದ್ಭಕ್ತಿಯಿಂ ದಾಸೋಹವಂ ಮಾಡಲು ನಿತ್ಯವು. ಇದು ಸಟೆ ಎಂದ ನರಕಕ್ಕಿಳಿದು ಕೆಡದಿರಿ ಕೆಡದಿರಿ. ಇದನರಿದು ಸಟೆಯ ದಿಟ ಮಾಡದಿರಿ. ಗುರು ಲಿಂಗ ಜಂಗಮಕ್ಕೆ ದಾಸೋಹವ ಮಾಡುವುದೇ ದಿಟ. ಇದು ಸತ್ಯ ಇದು ಸತ್ಯ, ಇದೇ ನಿತ್ಯ. ಇದೇ ಯುಕ್ತಿ, ಇದೇ ಭಕ್ತಿ, ಇದೇ ಶಕ್ತಿ, ಇದೇ ಮುಕ್ತಿ. ಇದು ಸತ್ಯ, ಶಿವ ಬಲ್ಲ, ಶಿವನಾಣೆ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ.

ಉರಿಲಿಂಗಪೆದ್ದಿ

ಸ್ಥಾಪನೆ : 1943 ತಂತಿ : 'ವೀರಶೈವ'

ಕೆ.ಎಸ್.ಟಿ. 73606285 } ದಿ 24-8-62
ಸಿ.ಎಸ್.ಟಿ. 73656288

ಕೇಂದ್ರ ಕಛೇರಿ : { 72866 / 70204

ಮಿನಿ ಬಜಾರ್: 351114

# ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅಪರ್ಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ. ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1993-94 ನೇ ಸಾಲಿನಲ್ಲಿ ಷೇರು ಬಂಡವಾಳ :

| | |
|---|---|
| ಸದಸ್ಯರಿಂದ | ರೂ. 7.08 ಲಕ್ಷ |
| ಸರ್ಕಾರದಿಂದ | ರೂ. 13.42 ಲಕ್ಷ |
| ಒಟ್ಟು | ರೂ. 20.50 ಲಕ್ಷ |

1) ಸದಸ್ಯರ ಸಂಖ್ಯೆ : 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1800.00 ಲಕ್ಷ
3) ಆಪದ್ಧನ : ರೂ. 12.98 ಲಕ್ಷ
4) ಇತರೆ ನಿಧಿಗಳು : ರೂ. 35.00 ಲಕ್ಷ
5) 1993-94 ರಲ್ಲಿ ನಿವ್ವಳ ಲಾಭ : ರೂ. 05.75 ಲಕ್ಷ
6) ಸದಸ್ಯರಿಗೆ ಸೌಲಭ್ಯಗಳು :
   ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 3 ರಿಯಾಯಿತಿ
   ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು
   ಅಧ್ಯಕ್ಷರು
2) ಶ್ರೀ ಜಿ.ತೋಟದಪ್ಪನವರು
   ಉಪಾಧ್ಯಕ್ಷರು

–: ನಿರ್ದೇಶಕರು :–

3) ಶ್ರೀ ಬಿ. ಎಸ್. ಪರಮಶಿವಯ್ಯನವರು
4) ಶ್ರೀ ವೈ. ಟಿ. ಮಹದೇವಪ್ಪನವರು
5) ಶ್ರೀ ಬಿ. ಟಿ. ಉಮೇಶ್‌ರವರು
6) ಶ್ರೀ ಬಿ. ಬಸವರಾಜುರವರು
7) ಶ್ರೀ ಎಂ. ಶಿವಪ್ಪನವರು
8) ಶ್ರೀ ಡಿ. ಚಂದ್ರಶೇಖರಯ್ಯನವರು
9) ಶ್ರೀ ಆರ್. ನೀಲಕಂಠಯ್ಯನವರು
10) ಶ್ರೀ ಜಿ. ಶಿವಕುಮಾರ್‌ರವರು
11) ಶ್ರೀಮತಿ ಎಸ್. ಗಿರಿಜರವರು
12) ಶ್ರೀಮತಿ ಪ್ರೇಮಸೋಮಸುಂದರ್‌ರವರು
13) ಶ್ರೀಮತಿ ಟಿ. ಕೆಂಪಮ್ಮನವರು M.L.C
    ಸ. ನಾ. ಪ್ರತಿನಿಧಿಗಳು
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ವ್ಯವಸ್ಥಾಪಕನಿರ್ದೇಶಕರು
    ಬಿ.ಡಿ. ಸಿ. ಸಿ. ಬ್ಯಾಂಕ್
17) ಉಪನಿಬಂಧಕರು, ಸಹಕಾರ ಸಂಘಗಳ
    ಉಪನಿಬಂಧಕರ ಕಛೇರಿ,
    ಬೆಂಗಳೂರು ನಗರ ಜಿಲ್ಲೆ
18) ಶ್ರೀ ಕೆ. ಎನ್. ನರಸಿಂಹಸ್ವಾಮಿಯವರು
    ಪ್ರಧಾನ ವ್ಯವಸ್ಥಾಪಕರು

ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳ ವಜ್ರಮಹೋತ್ಸವ ಪ್ರತಿಷ್ಠಾನ ಸ್ಮಾರಕಗಳು. ಶ್ರೀ ಸಿದ್ಧಗಂಗಾ ಮಠ ತ್ರಿವಿಧ ದಾಸೋಹ ಮಹಾಕಾರ್ಯಗಳಿಗೆ ವಿಶ್ವವಿಖ್ಯಾತ.



ಬೃಹತ್ ಪ್ರಸಾದ ನಿಲಯದ ಒಂದು ಪಾರ್ಶ್ವ ನೋಟ



ಬೃಹತ್ ವಿದ್ಯಾರ್ಥಿ ನಿಲಯದ ಒಂದು ಪಾರ್ಶ್ವನೋಟ.

ರಾಷ್ಟ್ರೀಯ ಏಕತೆ ಮತ್ತು ಭಾವೈಕ್ಯತೆ ಸಾಂಕೇತಿಕವಾಗಿ 5 ಕೋಟಿ ರೂ. ವೆಚ್ಚದಲ್ಲಿ ನಿರ್ಮಿ ಸಲಾಗುತ್ತಿದೆ. ಸರ್ವರ ಕಲ್ಯಾಣವನ್ನೇ ಬಯಸುತ್ತಿರುವ ಶ್ರೀಮಠದ ಐತಿಹಾಸಿಕ ಸ್ಮಾರಕಗಳ ನಾಡಿನ ಜನತೆ ಉದಾರವಾಗಿ ಕೂಪನ್‌ಗಳನ್ನು ಕೊಳ್ಳುವುದರ ಮೂಲಕ ನೆರವು ನೀಡಬೇಕಾಗಿ ಕೋರುತ್ತೇವೆ.

ಡಾ|| ಎಂ. ಸಿ. ಮೋದಿ,
ಅಧ್ಯಕ್ಷರು,

ಬಿ. ಎಸ್. ಮುದ್ದಪ್ಪ, ಐ.ಎ.ಎಸ್
ಕಾರ್ಯಾಧ್ಯಕ್ಷರು

ಶ್ರೀ ಶ್ರೀ ಶಿವಕುಮಾರಸ್ವಾಮಿಗಳ ವಜ್ರಮಹೋತ್ಸವ ಪ್ರತಿಷ್ಠಾನ
572104.